## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

ವಿಷಯ : **ಶ್ರೀ ರಾಮಕೃಷ್ಣ.ಎಸ್.ಎಂ.** ರವರು **ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ತೀರ್ಥಹಳ್ಳಿ ತಾಲ್ಲೂಕು ಪಂಚಾಯತಿ, 5–ಹಾದಿಗಲ್ಲು** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

ಉಲ್ಲೇಖ : 1) ಜಿಲ್ಲಾಧಿಕಾರಿಗಳು, **ಶಿವಮೊಗ್ಗ** ಜಿಲ್ಲೆ ರವರ ಪತ್ರದ ಸಂಖ್ಯೆ: **ಚು(3)ತಾಪಂ/ಜಿಪಂ.ವಿವ.65/2009–10** ದಿನಾಂಕ: **05–04–2011**

**2)** **ಆಯೋಗದ** ನೋಟೀಸು ಸಂಖ್ಯೆ: ರಾಚುಆ/66/ಟಿಜಡ್‌ಪಿ/2011, ದಿನಾಂಕ: **19–05–2011**

3) ಜಿಲ್ಲಾಧಿಕಾರಿಗಳು, **ಶಿವಮೊಗ್ಗ** ಜಿಲ್ಲೆ, ರವರ ಪತ್ರ ಸಂಖ್ಯೆ: **ಚು(4)ಸಿಆರ್.29/2011–12** ದಿನಾಂಕ: **07–03–2012**

**ಪ್ರಸ್ತಾವನೆ:**

**ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **5–ಹಾದಿಗಲ್ಲು** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀ ರಾಮಕೃಷ್ಣ.ಎಸ್.ಎಂ.** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಶಿವಮೊಗ್ಗ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **19–05–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **08–07–2011** ರಂದು **ಶ್ರೀ ರಾಮಕೃಷ್ಣ**.ಎಸ್.ಎಂ. ರವರಿಗೆ **ಗ್ರಾಮಲೆಕ್ಕಿಗರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಶ್ರೀ ರಾಮಕೃಷ್ಣ.ಎಸ್.ಎಂ.** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/66(1)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 23–04–2012**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **5–ಹಾದಿಗಲ್ಲು ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ಶ್ರೀ ರಾಮಕೃಷ್ಣ.ಎಸ್.ಎಂ.** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಶ್ರೀ ರಾಮಕೃಷ್ಣ.ಎಸ್.ಎಂ.** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**

**ರಾಜ್ಯ ಚುನಾವಣಾ ಆಯೋಗ.**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

ವಿಷಯ : **ಶ್ರೀಮತಿ ಗೀತಾ ಉಮೇಶ್** ರವರು **ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ತೀರ್ಥಹಳ್ಳಿ ತಾಲ್ಲೂಕು ಪಂಚಾಯತಿ, 6–ಹೊದಲ–ಅರಳಾಪುರ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

ಉಲ್ಲೇಖ :
1) ಜಿಲ್ಲಾಧಿಕಾರಿಗಳು, **ಶಿವಮೊಗ್ಗ** ಜಿಲ್ಲೆ ರವರ ಪತ್ರದ ಸಂಖ್ಯೆ: **ಚು(3)ತಾಪಂ/ಜಿಪಂ.ವಿವ.65/2009–10** ದಿನಾಂಕ: **05–04–2011**
2) ಆಯೋಗದ ನೋಟೀಸು ಸಂಖ್ಯೆ: ರಾಚುಆ/66/ಟಿಜಡ್‌ಪಿ/2011, ದಿನಾಂಕ: **19–05–2011**
3) ಜಿಲ್ಲಾಧಿಕಾರಿಗಳು, **ಶಿವಮೊಗ್ಗ** ಜಿಲ್ಲೆ, ರವರ ಪತ್ರ ಸಂಖ್ಯೆ: **ಚು(4)ಸಿಆರ್.29/2011–12** ದಿನಾಂಕ: **07–03–2012**

**ಪ್ರಸ್ತಾವನೆ:**

**ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **6–ಹೊದಲ–ಅರಳಾಪುರ** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀಮತಿ ಗೀತಾ ಉಮೇಶ್** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಶಿವಮೊಗ್ಗ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **19–05–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **12–07–2011** ರಂದು **ಶ್ರೀಮತಿ ಗೀತಾ ಉಮೇಶ್** ರವರಿಗೆ **ಗ್ರಾಮಲೆಕ್ಕಿಗರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಶ್ರೀಮತಿ ಗೀತಾ ಉಮೇಶ್** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/66(2)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 23–04–2012**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **6–ಹೊದಲ–ಅರಳಾಪುರ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ಶ್ರೀಮತಿ ಗೀತಾ ಉಮೇಶ್** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಶ್ರೀಮತಿ ಗೀತಾ ಉಮೇಶ್** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**
**ರಾಜ್ಯ ಚುನಾವಣಾ ಆಯೋಗ.**

**ಪಿ.ಆರ್.ನಂ. 593**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:02/11-12, ದಿನಾಂಕ:24-03-2012**

**ಉಪಸ್ಥಿತರು** :: ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** :: ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** :: ಶ್ರೀಮತಿ ಪ್ರೇಮಲತಾ ಎಸ್. ಹೆಗಡೆ, ಕೋಂ ದಿ॥ಸತೀಶ್‌ಚಂದ್ರ ಹೆಗಡೆ, ಅಲಂಕರ್, ಅಜ್ಜರಕಾಡ್, ಉಡುಪಿ ಜಿಲ್ಲೆ. (ಶ್ರೀ ಕೆ.ಟಿ.ಶೆಟ್ಟಿ, ವಕೀಲರು, ಸಾಗರ)

**ಪ್ರಸ್ತಾವನೆ:-**

ದಿ:30-05-2011ರಂದು ಸ್ವರಾಜ್ ಮಜ್ದಾ ವಾಹನ ಸಂಖ್ಯೆ ಕೆಎ-20-100 ರಲ್ಲಿ ಬೀಟೆ ನಾಟಾಗಳನ್ನು ಅಕ್ರಮ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಹೊಸನಗರ ವಲಯ ಹುಂಚ ಶಾಖೆಯ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:30-05-2011 ರಂದು ಹೊಸನಗರ ವಲಯದ ಹುಂಚ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾ. ಕಡಸೂರು ಗ್ರಾಮದ ಸ.ನಂ. 72ರ ಗಣಪತಿ ಕಾನ್‌ನ ಪಕ್ಕದ ರಸ್ತೆಯಲ್ಲಿ ಗಸ್ತು ಮಾಡುತ್ತಿರುವಾಗ ಒಂದು ವಾಹನ ನಿಂತಿರುವುದು ಕಂಡುಬಂದಿತು. ವಾಹನ ಸ್ವರಾಜ್ ಮಜ್ದಾ ಕೆಎ-20-100 ಆಗಿದ್ದು, ವಾಹನದೊಳಗಡೆ ಬೀಟೆ ಜಾತಿಯ 10 ತುಂಡುಗಳಿದ್ದು, ಅವುಗಳಿಗೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ. ಮತ್ತು ಇದನ್ನು ಸಾಗಿಸಲು ರಹದಾರಿ ಬಗ್ಗೆ ವಿಚಾರಿಸಲು ವಾಹನ ಹತ್ತಿರ ಯಾರು ಆಸಾಮಿಗಳಿರಲಿಲ್ಲ. ಸರ್ಕಾರಿ ಕಾಡಿನಿಂದ ಈ ರೀತಿ ವಾಹನದಲ್ಲಿ ರಹದಾರಿ ಇಲ್ಲದೇ ಸಾಗಿಸುವುದು ಅಕ್ರಮವೆಂದು ಪರಿಗಣಿಸಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ ಮತ್ತು ಮಹಜರ್ ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಪಡಿಸಿರುತ್ತಾರೆ. ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವನಪಾಲಕರು ಅರಣ್ಯ ಮೊಕದ್ದಮೆ ಸಂಖ್ಯೆ:15/11-12ನ್ನು ದಾಖಲಿಸಿರುತ್ತಾರೆ. ನಂತರ ವಾಹನವನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಈ ವಾಹನವನ್ನು ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಉಡುಪಿ ಇವರಿಗೆ ಬಿ3-ಅಮೊ-ವಾಹನ-ವಿವ-02/11-12 ದಿ:02-06-2011 ರಂದು ಪತ್ರ ಬರೆದು ಕೋರಲಾಗಿತ್ತು. ಅದರಂತೆ, ಸಾರಿಗೆ ಅಧಿಕಾರಿ, ಉಡುಪಿ ಇವರು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ದಿ:15-06-2011 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು ಶ್ರೀಮತಿ ಪ್ರೇಮಲತಾ ಎಸ್. ಹೆಗಡೆ, ಕೋಂ ದಿ॥ಸತೀಶ್‌ಚಂದ್ರ ಹೆಗಡೆ, ಅಲಂಕಾರ್, ಅಜ್ಜರಕಾಡ್, ಉಡುಪಿ ಜಿಲ್ಲೆ ಎಂದು ನಮೂದಾಗಿರುತ್ತದೆ. ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ? ಎನ್ನುವ ಬಗ್ಗೆ ಲಿಖಿತ ಹೇಳಿಕೆಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು 30 ದಿನಗಳ ಕಾಲಾವಕಾಶ ನೀಡಿ ಆರ್.ಸಿ. ಮಾಲೀಕರಿಗೆ ನೋಟಿಸ್‌ನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(i)ರ ಪ್ರಕಾರ ದಿ: 18-11-2011ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿರುತ್ತದೆ. ಸ್ವೀಕೃತಿ ಈ ನ್ಯಾಯಾಲಯಕ್ಕೆ ಪಡೆದಿದೆ.

ಆರ್.ಸಿ. ಮಾಲೀಕರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ದಿ:17-12-2011 ರಂದು ಅರ್ಜಿ ಸಲ್ಲಿಸಿ, ಸದರಿ ವಾಹನ ಕೆಎ-20-100ನ್ನು ಶ್ರೀ ಚಂದ್ರಶೇಖರ ಬಿನ್ ಸಿದ್ದು ಎಂ. ಶ್ರೀರಾಮ ನಿವಾಸ, ಬುಲ್ಲೂರು ಕುಲ್‌ಕೂಡೆ ಹಳೆಅಂಗಡಿ, ಮಂಗಳೂರು ಇವರಿಗೆ ಮಾರಾಟಾ ಮಾಡಿರುತ್ತಾರೆಂದು ಮತ್ತು ಈ ವಿಷಯವನ್ನು ಸಾರಿಗೆ ಅಧಿಕಾರಿ, ಉಡುಪಿ ಇವರಿಗೆ ತಿಳಿಸಿದೆ ಎಂದು ಹೇಳಿರುತ್ತಾರೆ. ಈ ವಿಷಯದ ಬಗ್ಗೆ ದಿ: 08-04-2010 ರಂದು ಸಾರಿಗೆ ಅಧಿಕಾರಿ, ಉಡುಪಿ ಇವರು ವಿತರಿಸಿದ "ಹಿಂಬರಹ"ದ ಜೆರಾಕ್ಸ್ ಅರ್ಜಿಯ ಜೊತೆಯಲ್ಲಿ ಲಗತ್ತಿಸಿರುತ್ತಾರೆ. ಈ ವಾಹನದಲ್ಲಿ ಅಕ್ರಮ ಸಾಗಾಣಿಕೆ ಮಾಡಿದ ಬಗ್ಗೆಯಾಗಲೀ ಅರ್ಜಿದಾರರಿಗೆ ಸಂಬಂಧವಿಲ್ಲವೆಂದು ಮತ್ತು ಈ ವಾಹನದ ಮೇಲೆ ಸೂಕ್ತ ಆದೇಶ ನೀಡಲು ಕೋರಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ:ಬಿ3:ಅಮೊ:ವಾಹನ:ಸಿಆರ್:16/11-12ದಿ:29-07-2011ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ

ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ದಿ:09–08–2011ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:27–10–2011ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–03–2012 ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಹೊಸನಗರ ವಲಯದ ಹುಂಚ ಶಾಖಾ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ನಿರ್ಧರಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.**

1. ಸ್ವರಾಜ್ ಮಜ್ದಾ ವಾಹನ ಕೆಎ–20–100 ರಲ್ಲಿ ಅರಣ್ಯ ಉತ್ಪನ್ನವಾದ ಬೀಟೆ ನಾಟಾ 10=1.814 ಎಂ3ನ್ನು ದಿ:30–05–2011ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಸದರಿ ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಈ ಕೆಳಗಿನಂತೆ ವಿವರಿಸಿದೆ.

**ಅಂಶ–1:**

ದಿ:30–05–2011 ರಂದು ಹೊಸನಗರ ವಲಯದ ಹುಂಚ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಹೊಸನಗರ ತಾ॥ ಕಡಸೂರು ಗ್ರಾಮದ ಸ.ನಂ. 72ರ ಗಣಪತಿ ಕಾನ್‌ನಲ್ಲಿ ಪಕ್ಕದ ರಸ್ತೆಯಲ್ಲಿ ಗಸ್ತು ತಿರುಗುತ್ತಿರುವಾಗ ಬೆಳಿಗ್ಗೆ ಸುಮಾರು 7–00 ಗಂಟೆ ಸಮಯದಲ್ಲಿ ಸ್ವರಾಜ್ ಮಜ್ದಾ ಕೆಎ–20–100 ರಲ್ಲಿ ಬೀಟೆ ನಾಟಾ 10=1.814 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿರುವ ಬಗ್ಗೆ ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರಿಗೆ ಸಲ್ಲಿಸಿರುತ್ತಾರೆ. ನಂತರ ವಲಯ ಅರಣ್ಯಾದಿಕಾರಿ, ಈ ದಾಖಲೆಗಳೊಂದಿಗೆ ವಾಹನ ಮತ್ತು ಬೀಟೆ ನಾಟಾವನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು & ವಿಳಾಸ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:18–01–2011 ರಂದು ಅಂಚೆ ಮೂಲಕ ಜಾರಿ ಮಾಡಿದೆ. ಹಾಗೂ ಸ್ವೀಕೃತಿ ಈ ನ್ಯಾಯಾಲಯಕ್ಕೆ ಬಂದಿದೆ. ಆರ್.ಸಿ. ಮಾಲೀಕರಾದ ಶ್ರೀಮತಿ ಪ್ರೇಮಲತಾ ಎಸ್. ಹೆಗಡೆ, ಕೋಂ ದಿ॥ಸತೀಶ್‌ಚಂದ್ರ ಹೆಗಡೆ, ಅಲಂಕರ್, ಅಜ್ಜರಕಾಡ್, ಉಡುಪಿ ಜಿಲ್ಲೆ. ಇವರು ದಿ:17–12–2011 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿ, ಈ ವಾಹನವನ್ನು ಶ್ರೀ ಚಂದ್ರಶೇಖರ ಬಿನ್ ಸಿದ್ದು, ಶ್ರೀರಾಮ ನಿವಾಸ, ಬಲ್ಲೂರು ಕುಲ್‌ಕೋಡೆ, ಹಳೇಅಂಗಡಿ, ಮಂಗಳೂರು ಇವರಿಗೆ ಈ ವಾಹನವನ್ನು ಮಾರಾಟಾ ಮಾಡಿದ್ದೇನೆಂದು, ಮತ್ತು ಈ ವಾಹನದ ಮೇಲೆ ಸೂಕ್ತ ಆದೇಶ ಹೊರಡಿಸಲು ಕೋರಿರುತ್ತಾರೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಸೂಕ್ತ ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:30–05–2011 ರಂದು ಸ್ವರಾಜ್ ಮಜ್ದಾ ಕೆಎ–20–100 ರಲ್ಲಿ ಬೀಟೆ ನಾಟಾ 10=1.814 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಹೊಸನಗರ ವಲಯದ ಹುಂಚ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ವಲಯ ಅರಣ್ಯಾಧಿಕಾರಿ, ಹೊಸನಗರ ಇವರಿಗೆ ಸಲ್ಲಿಸಿದ್ದು, ನಂತರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಈ ದಾಖಲೆಗಳೊಂದಿಗೆ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ.

**ಆರ್.ಸಿ. ಮಾಲೀಕರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ಈ ಕೆಳಗಿನಂತೆ ಕೋರಿರುತ್ತಾರೆ.**

1. ಆರ್.ಸಿ. ಮಾಲೀಕರು ಈ ವಾಹನವನ್ನು ಶ್ರೀ ಚಂದ್ರಶೇಖರ ಬಿನ್ ಸಿದ್ದು ಎಂ. ಶ್ರೀರಾಮ ನಿವಾಸ, ಬುಲ್ಲೂರು ಕುಲ್‌ಕೂಡೆ ಹಳೆಅಂಗಡಿ, ಮಂಗಳೂರು ಇವರಿಗೆ ಮಾರಾಟಾ ಮಾಡಿರುತ್ತಾರೆಂದು
2. ಆರ್.ಸಿ. ಮಾಲೀಕರು ಈ ವಿಷಯದ ಬಗ್ಗೆ ದಿ:08–04–2010 ರಂದು ಸಾರಿಗೆ ಅಧಿಕಾರಿ, ಉಡುಪಿ ಇವರು **"ಹಿಂಬರಹ"** ನೀಡಿರುತ್ತಾರೆ.

ಆದರೆ, ಬೀಟೆ ನಾಟಾ ಅಕ್ರಮವಾಗಿ ದಿ:30–05–2011 ರಂದು ಸಾಗಿಸಿದ ಸಮಯದಲ್ಲಿ ಸದರಿ ವಾಹನವು ಶ್ರೀಮತಿ ಪ್ರೇಮಲತಾ ಎಸ್. ಹೆಗಡೆ, ಕೋಂ ದಿ॥ ಸತೀಶ್‌ಚಂದ್ರ ಹೆಗಡೆ, ಅಲಂಕಾರ್, ಅಜ್ಜರಕಾಡ್, ಉಡುಪಿ ಜಿಲ್ಲೆ ಇವರ ಹೆಸರಿನಲ್ಲಿ ನೊಂದಣಿಯಾಗಿರುತ್ತದೆ.ಆದ್ದರಿಂದ ಇವರನ್ನೇ ಸದರಿ ವಾಹನದ ಮಾಲೀಕರೆಂದು ಪರಿಗಣಿಸಲಾಗಿದೆ. ಅಲ್ಲದೇ ಆರ್.ಸಿ. ಮಾಲೀಕರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವಾನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. …………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕರಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಸ್ವರಾಜ್ ಮಜ್ದಾ ಕೆಎ–20–100 (ಇಂಜಿನ್ ನಂ. Not visible, ಛಾಸಿಸ್ಸ್ ನಂ. C2EL4DM0023201) ಮತ್ತು ಈ ವಾಹನದಲ್ಲಿದ್ದ, 10 ತುಂಡು ಬೀಟೆ 01.814 ಎಂ3ವು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು

ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:24-03-2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ,**
**ಸಾಗರ ವಿಭಾಗ, ಸಾಗರ**

**ಪಿ.ಆರ್. ನಂ. 542**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ

**ಕ್ರ: ಬಿ3: ಅಮೊ:ವಾಹನ:ವಿವ:03/09-10, ದಿನಾಂಕ:24-03-2012**

**ಉಪಸ್ಥಿತರು** :: ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** :: ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ. (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** :: ಶ್ರೀ ರಮೇಶ ಎ.ಪಿ. ಬಿನ್ ಪ್ರಕಾಶ್ ಶೆಟ್ಟಿ, ಆವಿನಹಳ್ಳಿ, ಸಾಗರ ತಾಲ್ಲೂಕು. (ಶ್ರೀ ಇ. ನಾಗರಾಜ್, ವಕೀಲರು, ಸಾಗರ)

**ಪ್ರಸ್ತಾವನೆ:-**

ದಿ:24-04-2009 ರಂದು ಲಗೇಜ್ ಆಟೋ ನಂ:ಕೆಎ-15-4034 ರಲ್ಲಿ ಯತ್ಪೇಗ ನಾಟಾವನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಉಳ್ಳೂರು ಶಾಖೆ ವನಪಾಲಕರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:24-04-2009 ರಂದು ಸಾಗರ ವಲಯದ ಉಳ್ಳೂರು ಶಾಖಾ ವನಪಾಲಕರು ಮತ್ತು ಸಿಬ್ಬಂದಿಯವರು ಸಾಗರ ತಾಲ್ಲೂಕು ಕಸಬಾ ಹೋಬಳಿ, ಲಿಂಗದಹಳ್ಳಿ ಚಿಪ್ಲಿ ಗ್ರಾಮದ ವರದಾಮೂಲದಿಂದ ಚಿಪ್ಲಿಗೆ ಹೋಗುವ ಕೆರೆ ಏರಿಯ ಮೇಲೆ ಕಾಯುತ್ತಿರುವಾಗ ಒಂದು ಲಗೇಜ್ ಆಟೋ ನಂ:ಕೆಎ-15-4034 ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿರುತ್ತಾರೆ. ಆದರೆ, ಆಟೋವನ್ನು ನಿಲ್ಲಿಸದೇ ವೇಗವಾಗಿ ಮುಂದೆ ಚಿಪ್ಲಿ ಕಡೆಗೆ ಚಲಿಸಿರುತ್ತದೆ. ಇಲಾಖಾ ಜೀಪಿನಿಂದ ಬೆನ್ನಟ್ಟಿದಾಗ ಕೆರೆಯ ಏರಿಯ ಮೇಲೆ ಆಟೋವನ್ನು ನಿಲ್ಲಿಸಿ ಅದರಲ್ಲಿದ್ದ ಎರಡು ಆಸಾಮಿಗಳು ಕೈಗೆ ಸಿಗದೇ ಪರಾರಿಯಾದರು. ಆಟೋದೊಳಗಡೆ ಯತ್ಪೇಗ ಜಾತಿಯ 12 ನಾಟಾಗಳಿದ್ದು, ಸದರಿ ನಾಟಾಗಳು ಹಸಿಯಾಗಿದವು. ಈ ನಾಟಾಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ಮತ್ತು ಸಾಗಿಸಲು ರಹದಾರಿ ಇರಲಿಲ್ಲ. 12 ನಾಟಾಗಳನ್ನು ಕೆಳಗಿಳಿಸಿ ಅಳತೆ ಮಾಡಲಾಗಿ 0.418 ಎಂ3 ಪ್ರಮಾಣವಿರುತ್ತದೆ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ಕ್ರಮ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಪಡಿಸಿರುತ್ತಾರೆ. ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅ.ಮೊ.ಸಂಖ್ಯೆ 16/09-10ನ್ನು ವನಪಾಲಕರು ಕೇಸು ದಾಖಲಿಸಿರುತ್ತಾರೆ. ನಂತರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಮುಂದಿನ ತನಿಖೆಗಾಗಿ ವನಪಾಲಕರು ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರು ಈ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 05-05-2009ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರು ನ್ಯಾಯಾಲಯಕ್ಕೆ ಸಲ್ಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3-ಅಮೊ-ವಾಹನ-ವಿವ-03/09-10 ದಿ:05-05-2009 ರಂದು ಸಹಾಯಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ಕೋರಲಾಯಿತು. ಅದರಂತೆ, ಸಾರಿಗೆ ಅಧಿಕಾರಿ, ಸಾಗರ ಇವರು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ದಿ:19-05-2009 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು ಶ್ರೀ ಎ.ಪಿ.ರಮೇಶ್ ಬಿನ್ ಪ್ರಕಾಶ್‌ಶೆಟ್ಟಿ, ಆವಿನಹಳ್ಳಿ ಸಾಗರ ತಾ. ಎಂದು ನಮೂದಾಗಿರುತ್ತದೆ. ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(I)ರ ಪ್ರಕಾರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ ಎನ್ನುವುದಕ್ಕೆ ಲಿಖಿತ ಸಮಜಾಯಿಷಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು 30 ದಿನಗಳ ಕಾಲಾವಕಾಶ ನೀಡಿ ದಿ:02-06-2009ರಂದು ನೋಟಿಸ್‌ನ್ನು ಜಾರಿ ಮಾಡಿದೆ. ನೋಟಿಸ್ ಪಡೆದಿರುವುದಕ್ಕೆ ಸ್ವೀಕೃತಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಆರ್.ಸಿ. ಮಾಲೀಕರು ವಕೀಲರ ಮುಖಾಂತರ ಕ್ಲೇಮು ಅರ್ಜಿಯನ್ನು ದಿ:25–06–2009 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿ ವಾಹನ ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿರುತ್ತಾರೆ. ಇವರ ಕೋರಿಕೆ ಅರ್ಜಿಯನ್ನು ದಿ:31–10–2009 ರಂದು ತಿರಸ್ಕರಿಸಿ ಈ ನ್ಯಾಯಾಲಯದಿಂದ ಆದೇಶವಾಗಿದೆ. ಈ ಆದೇಶದ ಮೇಲೆ ಆರ್.ಸಿ. ಮಾಲೀಕರು ಮಾನ್ಯ ಶೀಘ್ರವಿಲೇವಾರಿ ನ್ಯಾಯಾಲಯ, ಸಾಗರ ಇಲ್ಲಿ ಕ್ರಿ.ಮಿ.ಅ.ನಂ. 18/2009 ರಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಸದರಿ ಅಫೀಲ್‌ನಲ್ಲಿ ದಿ:14–09–2011 ರಂದು ಆರ್.ಸಿ. ಮಾಲೀಕರ ಅರ್ಜಿಯನ್ನು ತಿರಸ್ಕರಿಸಿ ಆದೇಶವಾಗಿದೆ.

ಈ ಪ್ರಕರಣದಲ್ಲಿ ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಫೆಲಿಕ್ಸ್ ಡಿಸೋಜಾ, ವನಪಾಲಕ ಇವರನ್ನು ದಿ:29–10–2011 ರಂದು ನ್ಯಾಯಾಲಯಕ್ಕೆ ಕರೆಸಿ, ಸತ್ಯಪ್ರತಿಜ್ಞೆ ಬೋಧಿಸಲಾಯಿತು. ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ “2008 ರಿಂದ ಜೂನ್–2011 ರವರೆಗೆ ನಾನು ಹೆಗ್ಗೋಡು ಶಾಖೆಯಲ್ಲಿ ವನಪಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದೆನು. ದಿ:24–04–2009 ರಂದು ನಾನು ನಮ್ಮ ಇತರೆ ಇಲಾಖಾ ಸಿಬ್ಬಂದಿಯೊಂದಿಗೆ ಗಸ್ತು ಮಾಡುತ್ತಿದ್ದಾಗ ವರದಾಮೂಲದ ಚಿಪ್ಲಿ ಕೆರೆ ಏರಿಯ ಬಳಿ ಬರುತ್ತಿದ್ದಾಗ ಒಂದು ಲಗೇಜ್ ಆಟೋ ಬರುತ್ತಿದ್ದು, ನಿಲ್ಲಿಸಲು ಸೂಚನೆ ಕೊಟ್ಟೂರು ನಿಲ್ಲಿಸದೇ ವಾಪಸ್ ತಿರುಗಿ ಚಿಪ್ಲಿ–ಲಿಂಗದಹಳ್ಳಿ ಕಡೆ ಹೊರಟ್ಟಿದ್ದು, ನಾವು ಬೆನ್ನಟ್ಟಿದಾಗ ಸುಮಾರು 50 ಮೀ. ಅಂತರದಲ್ಲಿ ನಿಲ್ಲಿಸಿ ಅದರಲ್ಲಿದ್ದ ಇಬ್ಬರು ಆಸಾಮಿಗಳು ಪರಾರಿಯಾಗಿದ್ದು ಹಿಡಿಯಲು ಪ್ರಯತ್ನಿಸಿದರೂ ಸಿಕ್ಕಲಿಲ್ಲ. ವಾಹನವನ್ನು ಪರಿಶೀಲಿಸಿದಾಗ ಅಪೇ ಲಗೇಜ್ ಆಟೋ ನೊಂದಣಿ ಸಂ: ಕೆಎ–15–4034 ಆಗಿದ್ದು, ವಾಹನದಲ್ಲಿ ಒಟ್ಟು 12 ಯತ್ತೇಗ ತುಂಡುಗಳಿದ್ದವು. ಅವುಗಳ ಮೇಲೆ ಇಲಾಖಾ ಛಾಪಾ ಇರದ ಕಾರಣ ಸದರಿ ತುಂಡುಗಳನ್ನು ಮತ್ತು ವಾಹನವನ್ನು ಅಮಾನತ್ತುಪಡಿಸಿಕೊಂಡು ಮಹಜರ್ ಬರೆಯಲಾಯಿತು. ನಂತರ ಆಟೋ ಹಾಗೂ ಮಾಲನ್ನು ಕಛೇರಿಗೆ ತರಲಾಯಿತು. ಸ್ಥಳದಲ್ಲಿ ಮಾಡಿದ ಮಹಜರ್‌ನ್ನು ನಿಪಿ–1 ಎಂದು, ಅದರಲ್ಲಿದ್ದ ವನಪಾಲಕರ ಸಹಿಯನ್ನು ನಿಪಿ–1ಎ ಎಂದು ಗುರುತಿಸಲಾಯಿತು. ಮುಂದಿನ ಕ್ರಮವನ್ನು ಫೆಲಿಕ್ಸ್ ಎ.ಎಲ್. ವನಪಾಲಕರು ಜರುಗಿಸಿರುತ್ತಾರೆ. ಫೆಲಿಕ್ಸ್ ಈಗ ಜೀವಂತ ಇಲ್ಲ. ಅವರು ಸಲ್ಲಿಸಿದ್ದ ಪ್ರಥಮ ವರ್ತಮಾನ ವರದಿಯಲ್ಲಿನ ಅವರ ಸಹಿಯನ್ನು ನಿಪಿ–2ಎ ಎಂದು, ಜಪ್ತು ವರದಿಯನ್ನು ನಿಪಿ–3 ಹಾಗೂ ಅದರಲ್ಲಿನ ಫೆಲಿಕ್ಸ್ ವನಪಾಲಕರ ಸಹಿಯನ್ನು ನಿಪಿ–3ಎ ಎಂದು ಗುರುತಿಸಿದೆ. ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಿದ್ದರಿಂದ ಮುಟ್ಟುಗೋಲು ಹಾಕಿಕೊಳ್ಳಲು ಕೋರಿದೆ.”

ಪಾಟಿಸವಾಲು ಮಾಡಲು ಡಿಫೆನ್ಸ್ ಕಡೆಯ ವಕೀಲರಿಗೆ ದಿ:29–10–2011 ರಂದು ದಿನಾಂಕ ನೀಡಿದ್ದರೂ. ಡಿಫೆನ್ಸ್ ಕಡೆಯ ವಕೀಲರು ಹಾಜರಾಗದೇ ಇರುವುದರಿಂದ ಪಾಟಿಸವಾಲು ಇಲ್ಲವೆಂದು ಪರಿಗಣಿಸಲಾಯ್ತು.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:19–11–2011, 31–12–2011, 07–01–2012 ರಂದು 3 ಬಾರಿ ದಿನಾಂಕ ನೀಡಿದೆ. ಮತ್ತು ವಾದ ಮಂಡಿಸಲು ದಿ:03–03–2012 ರಂದು 1 ಬಾರಿ ದಿನಾಂಕ ನೀಡಿದೆ. ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಡಿಫೆನ್ಸ್ ಕಡೆಯ ವಕೀಲರಾಗಲೀ, ಅರ್ಜಿದಾರರಾಗಲೀ ಹಾಜರಾಗಿರುವುದಿಲ್ಲ. ಇದರಿಂದ ಈ ಪ್ರಕರಣದಲ್ಲಿ ಡಿಫೆನ್ಸ ಕಡೆಯವರಿಗೆ ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಆಸಕ್ತಿ ಇಲ್ಲವೆಂದು ಪರಿಗಣಿಸಿ ಮುಂದಿನ ಕ್ರಮಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–03–2012 ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ಉಳ್ಳೂರು ಶಾಖೆಯ ವನಪಾಲಕರು ಪತ್ತೆಹಚ್ಚಿ ಕೇಸು ದಾಖಲಿಸಿರುವ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿ ಮತ್ತು ವಿಚಾರಣಾ ವರದಿಯನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ನಿರ್ಧರಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.**

1. ಅಪೇ ಲಗೇಜ್ ಆಟೋ ವಾಹನ ಕೆಎ–15–4034ರಲ್ಲಿ ಅರಣ್ಯ ಉತ್ಪನ್ನವಾದ ಯತ್ತೇಗ ನಾಟಾ 12=0.418 ಎಂ3ನ್ನು ದಿ:24–04–2009 ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಸದರಿ ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಯತ್ತೇಗ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?
4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:24–04–2009 ರಂದು ಸಾಗರ ವಲಯದ ಉಳ್ಳೂರು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಸಾಗರ ತಾ. ಕಸಬಾ ಹೋಬಳಿ ಲಿಂಗದಹಳ್ಳಿ–ಚಿಪ್ಳಿ ಗ್ರಾಮದ ವರದಾಮೂಲದಿಂದ ಚಿಪ್ಳಿಗೆ ಹೋಗುವ ರಸ್ತೆಯ ಕೆರೆಯ ಏರಿಯ ಮೇಲೆ ಗಸ್ತು ಕಾಯುತ್ತಿರುವಾಗ ಅಪೇ ಲಗೇಜ್ ಆಟೋ ಕೆಎ–15–4034ರಲ್ಲಿ ಯತ್ಯೇಗ ನಾಟಾ 12=0.418 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿರುವುದನ್ನು ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರಿಗೆ ಸಲ್ಲಿಸಿರುತ್ತಾರೆ. ನಂತರ ವಲಯ ಅರಣ್ಯಾದಿಕಾರಿ, ಈ ದಾಖಲೆಗಳೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ರಮೇಶ ಎ.ಪಿ., ಬಿನ್ ಪ್ರಕಾಶ್ ಶೆಟ್ಟಿ, ಆವಿನಹಳ್ಳಿ, ಸಾಗರ ತಾಲ್ಲೂಕು. ಇವರು ದಿ:25–06–2009ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:02–06–2009 ರಂದು ಅಂಚೆ ಮೂಲಕ ಜಾರಿ ಮಾಡಿದೆ. ಹಾಗೂ ಸ್ವೀಕೃತಿ ಈ ನ್ಯಾಯಾಲಯಕ್ಕೆ ಬಂದಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು ಮೂರು ಬಾರಿ ದಿನಾಂಕಗಳನ್ನು ನೀಡಲಾಗಿದ್ದು. ಮತ್ತು ವಾದ ಮಂಡಿಸಲು ಒಂದು ಬಾರಿ ದಿನಾಂಕವನ್ನು ನೀಡಲಾಗಿತ್ತು. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:24–04–2009 ರಂದು ಅಪೇ ಲಗೇಜ್ ಆಟೋ ಕೆಎ–15–4034ರಲ್ಲಿ 12 ಯತ್ಯೇಗ ನಾಟಾ 0.418 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಸಾಗರ ವಲಯದ ಉಳ್ಳೂರು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ವಲಯ ಅರಣ್ಯಾಧಿಕಾರಿ, ಸಾಗರ ಇವರಿಗೆ ಸಲ್ಲಿಸಿದ್ದು, ನಂತರ ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರು ಈ ದಾಖಲೆಗಳೊಂದಿಗೆ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ಅವರ ಸ್ನೇಹಿತನಾದ ಜೆ.ಎನ್.ಶಂಕರ್ ರವರಿಗೆ ಈ ವಾಹನವನ್ನು ಸುಪರ್ಧಿಗೆ ಕೊಟ್ಟಿರುವ ಬಗ್ಗೆ ದಿ:25–06–2009ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿರುತ್ತಾರೆ. ಆದರೆ, ಡಿಫೆನ್ಸ್ ಕಡೆಯವರು ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಹಾಗೂ ಸಾಕ್ಷಿಯ ವಿಚಾರಣೆಯನ್ನು ಮಾಡಿಸಿರುವುದಿಲ್ಲ. ಇದರಿಂದ ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥಾವ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚೆರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ………………………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಅಲ್ಲದೇ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ-4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ಅಪೇ ಲಗೇಜ್ ಆಟೋ ಕೆಎ-15-4034 ಮತ್ತು ಯತ್ಯೇಗ ನಾಟಾ 12=0.418 ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:24-03-2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ**
**ಸಾಗರ ವಿಭಾಗ, ಸಾಗರ.**

**ಪಿ.ಆರ್. ನಂ. 543**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3 : ಅಮೊ:ವಾಹನ:ವಿವ:05/10-11 ದಿನಾಂಕ:24-03-2012**

**ಉಪಸ್ಥಿತರು** :: ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರ** :: ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಆನವಟ್ಟಿ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** :: ಶ್ರೀ ಲಿಯಾಕತ್ ಆಲಿ ಬಿನ್ ಇಮಾಮ್‌ಸಾಬ್, ಮಳಗಿ ಗ್ರಾಮ, ರಟ್ಟೆಹಳ್ಳಿ-ಅಂಚೆ, ಹಿರೇಕೆರೂರು ತಾ. ಹಾವೇರಿ ಜಿ. (ಶ್ರೀ ಹೆಚ್.ಎನ್.ದಿವಾಕರ್, ವಕೀಲರು, ಸಾಗರ)

**ಪ್ರಸ್ತಾವನೆ:-**

ದಿ:05-06-2011ರಂದು ಒಂದು ವಾಹನ ಟಾಟಾಏಸ್ ಕೆಎ-27-ಎ-4419ರಲ್ಲಿ ಸಾಗುವಾನಿ ನಾಟಾ ಅಕ್ರಮವಾಗಿ ಸಾಗಿಸುತ್ತಿರುವುದನ್ನು ಆನವಟ್ಟಿ ವಲಯದ ಜಡೆ ಶಾಖೆಯ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:05-06-2011ರಂದು ಆನವಟ್ಟಿ ವಲಯದ ಜಡೆ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದಂತೆ ಸೊರಬ ತಾ. ಜಡೆ ಹೋಬಳಿ, ತಲಗದ್ದೆ ಎಸ್.ಎಫ್.ನ ತುಂಪಿನಕಟ್ಟೆ ಬಳಿ ಕಾಯುತ್ತಿರುವಾಗ ತುಂಪಿನಕಟ್ಟೆ ಕಡೆಯಿಂದ ಜಡೆ-ಹೊಸೂರು ಮಧ್ಯದ ಕಾಡಿಗೆ ಒಂದು ವಾಹನ ಹೋಗಿದ್ದು ನೋಡಿರುತ್ತಾರೆ. ನಂತರ ಈ ವಾಹನ ವಾಪಾಸ್ ಅದೇ ಮಣ್ಣಿನ ರಸ್ತೆಯಲ್ಲಿ ಬರುತ್ತಿರುವುದನ್ನು ಇಲಾಖಾ ಸಿಬ್ಬಂದಿಗಳು ನಿಲ್ಲಿಸಲು ಪ್ರಯತ್ನಿಸಿದಾಗ ಚಾಲಕನ್ನು ದೂರದಿಂದಲೇ ಇಲಾಖೆಯವರನ್ನು ನೋಡಿ ವಾಹನ ದೂರದಲ್ಲಿ ನಿಲ್ಲಿಸಿ ವಾಹನದಿಂದಳಿದು ಕಾಡಿನೊಳಗೆ ಓಡಲು ಪ್ರಾರಂಭಿಸಿದನು. ಸದರಿ ಆಸಾಮಿಯನ್ನು ಇಲಾಖೆಯವರು ಬೆನ್ನಟ್ಟಿದರು ಕೈಗೇ ಸಿಗದೇ ಪರಾರಿಯಾದನು. ನಂತರ ವಾಹನ ಪರಿಶೀಲಿಸಿದಾಗ ವಾಹನ ಸಂಖ್ಯೆ:ಕೆಎ-27-ಎ-4419 ಎಂದು ನಂಬರ್ ಪ್ಲೇಟ್ ಇದ್ದು, ವಾಹನದೊಳಗಡೆ 10 ಸಾಗುವಾನಿ ಸೈಜ್ ಇರುತ್ತದೆ. ಈ ನಾಟಾಗಳ ಅಳತೆ ಮಾಡಿದಾಗ 10=0.609 ಎಂ3 ಪ್ರಮಾಣವಿರುತ್ತದೆ. ಈ ಸೈಜುಗಳ ತುದಿ ಬುಡದಲ್ಲಿ ಇಲಾಖಾ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವನಪಾಲಕರು ಅರಣ್ಯ ಮೊಕದ್ದಮೆ ಸಂಖ್ಯೆ:31/10-11ನ್ನು ದಾಖಲಿಸಿರುತ್ತಾರೆ. ನಂತರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಆನವಟ್ಟಿ ಇವರ ಸಮಕ್ಷಮ ಹಾಜರ್‍ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಆನವಟ್ಟಿ ಇವರು ಈ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಸದರಿ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ಪ್ರಕರಣದಲ್ಲಿ ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ, ಹಾವೇರಿ ಇವರಿಗೆ ಬಿ3–ಅಮೊ–ವಾಹನ–ವಿವ–05/11–12 ದಿ:09–06–2010 ರಂದು ಪತ್ರ ಬರೆದು ಕೋರಲಾಯಿತು. ಅದರಂತೆ, ಸಾರಿಗೆ ಅಧಿಕಾರಿ, ಹಾವೇರಿ ಇವರು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ದಿ:03–08–2010 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಶ್ರೀ ಲಿಯಾಕತ್ ಆಲಿ ಬಿನ್ ಇಮಾಮ್‌ಸಾಬ್, ಮಳಗಿ ಗ್ರಾಮ, ರಟ್ಟೆಹಳ್ಳಿ–ಅಂಚೆ, ಹಿರೇಕೆರೂರು ತಾ. ಹಾವೇರಿ ಜಿ. ಎಂದು ಆರ್.ಸಿ. ಮಾಲೀಕರ ಹೆಸರು ನಮೂದಿಸಲಾಗಿತ್ತು. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಿಗೆ ದಿ:05–08–2010 ರಂದು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ಕಾರಣ ಕೇಳಿ ನೋಟಿಸ್‌ನ್ನು 30 ದಿನಗಳ ಕಾಲವಕಾಶ ನೀಡಿ ನೊಂದಣಿ ಅಂಚೆ ಮೂಲಕ ಜಾರಿ ಮಾಡಲಾಗಿದೆ.

ಶ್ರೀ ಲಿಯಾಕತ್ ಆಲಿ ಬಿನ್ ಇಮಾಮ್‌ಸಾಬ್, ಮಳಗಿ ಗ್ರಾಮ, ರಟ್ಟೆಹಳ್ಳಿ–ಅಂಚೆ, ಹಿರೇಕೆರೂರು ತಾ. ಹಾವೇರಿ ಜಿ. ಇವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ದಿ:12–07–2010 ರಂದು ಸಲ್ಲಿಸಿರುತ್ತಾರೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಲಿಯೊ ಪುಡ್ತದ್ ವನಪಾಲಕನನ್ನು ದಿನಾಂಕ:05–02–2011ರಂದು ನ್ಯಾಯಾಲಯಕ್ಕೆ ಕರೆಸಿ ಸತ್ಯ ಪ್ರತಿಜ್ಞೆ ಬೋಧಿಸಲಾಯಿತು. ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ನಾನು 2008 ರಿಂದ 2010ರವರೆಗೆ ಆನವಟ್ಟಿ ವಲಯದ ಜಡೆ ಶಾಖೆಯಲ್ಲಿ ವನಪಾಲಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿ:05–06–2010ರಂದು ಬಂದ ಖಚಿತ ವರ್ತಮಾನದ ಮೇರೆಗೆ ನಾನು, ಜಗದೀಶ್, ವನಪಾಲಕ, ಅರಣ್ಯ ರಕ್ಷಕರಾದ ಮಕ್ಬೂಲ್ ಮತ್ತು ವಿಶ್ವನಾಥ ರವರೊಂದಿಗೆ ತಲಗದ್ದೆ ಎಸ್.ಎಫ್.ನ ತುಂಪಿನಕಟ್ಟೆ ಬಳಿ ಕಾಯುತ್ತಿರುವಾಗ ತುಂಪಿನಕಟ್ಟೆ ಕಾಡಿನಿಂದ ಒಂದು ವಾಹನ ಬರುತ್ತಿರುವುದನ್ನು ಕಂಡು ಅದನ್ನು ನಿಲ್ಲಿಸಲು ಸೂಚಿಸಿದೆವು. ನಮ್ಮಿಂದ ದೂರದಲ್ಲಿಯೇ ವಾಹನ ನಿಲ್ಲಿಸಿ ನಮ್ಮನ್ನು ನೋಡಿ ಚಾಲಕನು ಓಡಿಹೋದನು. ನಾವು ಹಿಡಿಯಲು ಪ್ರಯತ್ನಿಸಿದರೂ ಸಿಗಲಿಲ್ಲ. ನಂತರ ವಾಹನವನ್ನು ಪರಿಶೀಲಿಸಿದಾಗ ಅದು ಟಾಟಾ ಏಸ್ ಆಗಿದ್ದು, ನೊಂದಣಿ ಸಂಖ್ಯೆ:ಕೆಎ–27–ಎ–4419 ಎಂಬುದಾಗಿ ಕಂಡುಬಂದಿತು. ಅದನ್ನು ಪರಿಶೀಲಿಸಲಾಗಿ ಅದರಲ್ಲಿ 10 ಸಾಗುವಾನಿ ಸೈಜುಗಳಿದ್ದವು. ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾವಿರಲಿಲ್ಲ. ಎರಡೂ ಬದಿಗಳನ್ನು ಗರಗಸದಿಂದ ಕೊಯ್ದಿದ್ದು, ಒರಟು ಕೆತ್ತನೆ ಮಾಡಿದವುಗಳಾಗಿದ್ದವು. ನಂತರ ಅವುಗಳನ್ನು ಅಳತೆ ಮಾಡಿ, ಇಲಾಖಾ ಛಾಪಾ ಹೊಡೆದು ಕ್ರಮಸಂಖ್ಯೆ ಕೊಟ್ಟು ವಾಹನ ಮತ್ತು ತುಂಡುಗಳನ್ನು ಅಮಾನತ್ತುಪಡಿಸಿಕೊಂಡು ಮಹಜರ್ ಬರೆದೆವು. ಆಗ ಮಾಡಿದ ಮಹಜರನ್ನು ನೋಡಲಾಗಿ ನಿಪಿ–1 ಎಂದು, ಅದರಲ್ಲಿನ ನನ್ನ ಸಹಿಯನ್ನು ನಿಪಿ–1ಎ ಎಂದು, ಆ ಬಗ್ಗೆ ಪ್ರಥಮ ವರ್ತಮಾನ ವರದಿ ದಾಖಲಿಸಿದ್ದು ಅದನ್ನು ನಿಪಿ–2 ಎಂದು, ಅದರಲ್ಲಿನ ನನ್ನ ಸಹಿಯನ್ನು ನಿಪಿ–2ಎ ಎಂದು, ಅಮಾನತ್ತು ಪಡಿಸಿಕೊಂಡ ವಸ್ತುಗಳ ಜಪ್ತುವರದಿ ತಯಾರಿಸಿದ್ದು, ನಿಪಿ–3 ಎಂದು, ಅದರಲ್ಲಿನ ನನ್ನ ಸಹಿಯನ್ನು ನಿಪಿ–3ಎ ಎಂದು ಗುರುತಿಸಲಾಯಿತು. ನಂತರ ಮರದ ಬುಡದ ಬಳಿ ಮಾಡಿದ ಮಹಜರನ್ನು ಈಗ ನೋಡುತ್ತಿದ್ದು, ಅದನ್ನು ನಿಪಿ–4 ಎಂದು, ಅದರಲ್ಲಿನ ನನ್ನ ಸಹಿಯನ್ನು ನಿಪಿ–4ಎ ಎಂದು ಗುರ್ತಿಸಿದೆ. ಸದರಿ ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಿದ್ದರಿಂದ ಅದನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಬೇಕಾಗಿ ಕೋರಿಕೊಳ್ಳುತ್ತೇನೆ.

ಪಾಟಿ ಸವಾಲು ಹೆಚ್.ಎನ್.ಡಿ. ವಕೀಲರಿಂದ "ಆ ದಿನ ನಮಗೆ ಸುಮಾರು 7–30ರ ಸಮಯದಲ್ಲಿ ಖಚಿತ ವರ್ತಮಾನ ಬಂದಿತು. ಜಡೆ–ಹೊಸೂರು ಮಧ್ಯದಲ್ಲಿರುವ ತುಂಪಿನಕಟ್ಟೆಗೆ ಹೋಗುವ ಮಣ್ಣಿನ ರಸ್ತೆಯಲ್ಲಿ ನಾವು ಇದ್ದೆವು. ನಾನು ಮನೆಯಿಂದ 5–30 ಗಂಟೆಗೆ ನನ್ನ ದ್ವಿಚಕ್ರವಾಹನದಲ್ಲಿ ಹೋಗಿದ್ದೆ. ನಮ್ಮ ಸಿಬ್ಬಂದಿಯವರು ಸಹ ದ್ವಿಚಕ್ರ ವಾಹನದಲ್ಲಿ ಬಂದಿದ್ದರು. ನನಗೆ ದೂರವಾಣಿ ಮೂಲಕ ವರ್ತಮಾನ ಬಂದಿತು. ವರ್ತಮಾನ ಬಂದಿದ್ದರಿಂದ ಮಣ್ಣಿನ ರಸ್ತೆಯಲ್ಲಿ ಕಾಯುತ್ತಿರುವಾಗ ಒಂದು ವಾಹನ ಕಾಡಿನ ಕಡೆ ಹೋಯಿತು. ಕತ್ತಲಾಗಿದ್ದರಿಂದ, ವಾಹನ ವೇಗವಾಗಿ ಹೋಗಿದ್ದರಿಂದ ವಾಹನದಲ್ಲಿ ಎಷ್ಟು ಜನರಿದ್ದರು ಎಂಬುದು ಕಂಡುಬರಲಿಲ್ಲ. ಮುಖ್ಯರಸ್ತೆಯಿಂದ ಕಾಡಿಗೆ ತಿರುಗುವ ಮಣ್ಣುರಸ್ತೆಯ ತಿರುವಿನಲ್ಲಿ ನಾವು ನಿಂತಿದ್ದೆವು. ನಮ್ಮ ವಾಹನವನ್ನು ಪಕ್ಕಕ್ಕೆ ನಿಲ್ಲಿಸಿದ್ದೆವು. ವಾಹನವು ಮುಖ್ಯ ರಸ್ತೆಯಿಂದ ಮಣ್ಣುರಸ್ತೆಗೆ ತಿರುಗುವಾಗ ನಿಧಾನವಾಗಿ ಚಲಿಸದೇ ವೇಗವಾಗಿ ಹೋಯಿತು. ನಾವು 7–30ಕ್ಕೆ ಕಾಯುತ್ತಿದ್ದು. 15 ನಿಮಿಷದ ನಂತರ ವಾಹನ ಬಂದಿತು. ಅದೇ ಜಾಗದಲ್ಲಿ ನಾವು ಕಾಯುತ್ತಾ ನಿಂತಿದ್ದೆವು. ನಾವು ಕಾಯುತ್ತಿರುವ ಜಾಗದಲ್ಲಿ ಕಾಡು ಮರಗಳಿಲ್ಲ. ಕುರುಚಲು ಗಿಡಗಳಿದ್ದವು. ನಂತರ ಕಾಡಿನಿಂದ ವಾಹನ ಸುಮಾರು 8–15ರ ಸಮಯಕ್ಕೆ ಬಂದಿತು. ನಾವು ಕಾಯುತ್ತಾ ನಿಂತಿರುವ ಸಮಯದಲ್ಲಿ ಹೋದ ವಾಹನ ವಾಪಾಸ್ ಬಂದಿತು. ತಿರುವಿನಲ್ಲಿರುವ ಕುರುಚಲು ಮಟ್ಟಿಯಲ್ಲಿ ಅಡಗಿ ಕುಳಿತಿದ್ದೆವು. ಖಚಿತ ವರ್ತಮಾನ ಬಂದಿದ್ದರೂ ಸದರಿ ವಾಹನವನ್ನು ಬೆನ್ನಟ್ಟಿ ಹೋಗಿರುವುದಿಲ್ಲ. ಸದರಿ ವಾಹನವು ನಾಟಾ ತುಂಬಲು ಹೋಗಿರಬಹುದೆಂಬ ಅನುಮಾನವಿತ್ತು. ಅನುಮಾನ ಬಂದರೂ ಸಹ ನಾವು ವಾಹನವನ್ನು ಹಿಂಬಾಲಿಸಲಿಲ್ಲ. ವಾಹನ ವಾಪಾಸ್ ಬಂದಾಗ ಅಲ್ಲಿಯೇ ಇದ್ದೆವು. ವಾಹನ ವಾಪಾಸ್ಸು ಬರುವ ಸಮಯದಲ್ಲಿ ಮಣ್ಣು ರಸ್ತೆಯಲ್ಲಿ ನಿಂತಿದ್ದೆವು. ನಾವು ವಾಹನ ನಿಲ್ಲಿಸಲು ಸೂಚನೆ ಕೊಟ್ಟಾಗ ವಾಹನ ಸುಮಾರು 15 ಅಡಿ ಅಂತರದಲ್ಲಿತ್ತು. ಆ ಸಮಯದಲ್ಲಿ ಜನ ಸಂಚಾರ ಇರಲಿಲ್ಲ. ವಾಹನವನ್ನು ಯಾರು ಚಲಾಯಿಸಿಕೊಂಡು ಬಂದರೆಂಬುದು ನಮಗೆ ತಿಳಿದಿರುವುದಿಲ್ಲ. ವಾಹನದಲ್ಲಿದ್ದ ಸೈಜುಗಳು ಆಗತಾನೇ ಕೊಯ್ದ ಹಸಿ ತುಂಡುಗಳಾಗಿದ್ದವು. ನಾವು ವಾಹನ ಹಿಡಿದ ಸಮಯಕ್ಕಿಂತ 2 ಗಂಟೆ ಮೊದಲು ಕೊಯ್ದಿರಬಹುದಾದ ಮರಗಳಾಗಿರುತ್ತವೆ. ಅಮಾನತ್ತು ಪಡಿಸಿದ ತುಂಡುಗಳ ಅಳತೆ ಮಾಡಿದ್ದು, ಮಹಜರನ್ನು ಕಛೇರಿಯಲ್ಲಿ ಬರೆಯಲಾಗಿದೆ ಎಂದರೆ ಸರಿಯಲ್ಲ. ಸ್ಥಳ ಮಹಜರ್ ಆದ ನಂತರ ಅಮಾನತ್ತು ಪಡಿಸಿದ

ವಸ್ತುಗಳನ್ನು ವಲಯ ಅರಣ್ಯಾಧಿಕಾರಿಗಳ ಕಛೇರಿಗೆ ಒಪ್ಪಿಸಲಾಯಿತು. ನನ್ನ ಮಹಜರ್‌ನಲ್ಲಿ ನಾನು ಅಮಾನತ್ತು ಪಡಿಸಿದ ವಾಹನ, ನಾಟಾವನ್ನು ವಲಯ ಅರಣ್ಯಾಧಿಕಾರಿಗಳ ಕಛೇರಿ, ಆನವಟ್ಟಿಗೆ ತಂದು ಒಪ್ಪಿಸಿದ್ದೇನೆಂದು ಬರೆದಿದ್ದೇನೆ. ಸದರಿ ದಿನದಂದು ಸ್ಥಳಕ್ಕೆ ಹೋಗಿಲ್ಲ, ಸ್ಥಳದಲ್ಲಿ ವಾಹನ ಮತ್ತು ತುಂಡುಗಳನ್ನು ಅಮಾನತ್ತು ಪಡಿಸಿಕೊಂಡಿಲ್ಲ ಎಂದರೆ ಸರಿಯಲ್ಲ. ಸದರಿ ವಾಹನದಲ್ಲಿ ಯಾವುದೇ ತುಂಡುಗಳಿರಲಿಲ್ಲವೆಂದರೆ ಸರಿಯಲ್ಲ. ತುಂಡುಗಳಿಗೂ, ವಾಹನ ಮಾಲಿಕರಿಗೂ ಯಾವುದೇ ರೀತಿಯ ಸಂಬಂಧವಿಲ್ಲವೆಂದರೆ ಸರಿಯಲ್ಲ. ಒರಟು ಕೆತ್ತನೆ ಮಾಡಿದ ತುಂಡುಗಳಾಗಿರುವುದರಿಂದ ಸದರಿ ತುಂಡುಗಳನ್ನು ಎಷ್ಟು ಮರದಿಂದ ಕಡಿತಲೆ ಮಾಡಲಾಗಿದೆ ಎಂದು ಹೇಳಲು ಆಗುವುದಿಲ್ಲವೆಂದರೆ ಸರಿಯಲ್ಲ. 1 ಮತ್ತು 2ನೇ ಮರದಿಂದ ಎರಡೆರಡು ತುಂಡುಗಳನ್ನು 3 ಮತ್ತು 4ನೇ ಮರದಿಂದ ತಲಾ ಮೂರು ತುಂಡುಗಳನ್ನು ಮಾಡಲಾಗಿತ್ತು. ಯಾವ ತುಂಡುಗಳನ್ನು ಯಾವ ಮರದಿಂದ ಕತ್ತರಿಸಲಾಗಿದೆ ಎಂಬುದನ್ನು ಗುರ್ತಿಸಲು ಸ್ವಲ್ಪ ಕಷ್ಟವಾಗುತ್ತದೆ. ಆದ ಕಾರಣ ಎಷ್ಟು ಮರದಿಂದ ಕಡಿದಿದೆ ಎಂದು ಹೇಳಲು ಆಗುವುದಿಲ್ಲವೆಂದರೆ ಸರಿಯಲ್ಲ. ನಾವು ವಾಹನ ಹಿಡಿದ ಸ್ಥಳದಿಂದ ಸುಮಾರು 1.5 ಕಿ.ಮೀ. ದೂರದಲ್ಲಿ ನಿಪಿ 4 ಮಹಜರ್ ಮಾಡಿದ ಸ್ಥಳವಿದೆ. ಸದರಿ ಮಹಜರ್ ಮಾಡುವಾಗ ಸಂಬಂಧಪಟ್ಟ ಬೀಟ್ ಗಾರ್ಡ್ ಮಾತ್ರ ಇದ್ದರು. ಮಹಜರನ್ನು ಮಾರನೇ ದಿನ ಸಂಜೆ ಮಧ್ಯಾಹ್ನ 3–00 ಗಂಟೆಗೆ ಮಾಡಲಾಗಿದೆ. ಆ ದಿನ ಮಹಜರ್ ಮಾಡಿಲ್ಲವೆಂದರೆ ಸರಿಯಲ್ಲ. ತಲಗದ್ದೆ ಎಸ್.ಎಫ್. ಸ.ನಂ: 1ರಲ್ಲಿದೆ. ಗ್ರಾಮ ಮತ್ತು ಸರ್ವೆ ನಂಬರ್ ಮಹಜರ್‌ನಲ್ಲಿ ನಮೂದಿಸಿರುವುದಿಲ್ಲ. ಹಾಗೂ ಚೆಕ್ಕುಬಂದಿ ನಮೂದಿಸಿಲ್ಲ. ಮೇಲಾಧಿಕಾರಿಗಳ ಮಾತು ಕೇಳಿ ಸುಳ್ಳುಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ."

ಡಿಫೆನ್ಸ್ ಸಾಕ್ಷಿಯನ್ನು ದಿನಾಂಕ:29–10–2011ರಂದು ಈ ನ್ಯಾಯಾಲಯಕ್ಕೆ ಕರೆಯಿಸಿ ಸತ್ಯ ಪ್ರತಿಜ್ಞೆ ಬೋಧಿಸಲಾಯಿತು. ಮುಖ್ಯ ವಿಚಾರಣೆ ಹೆಚ್.ಎನ್.ಡಿ. ವಕೀಲರಿಂದ "ನಾನು ಕೆಎ–27–ಎ–4419 ಟಾಟಾಎಸ್ ವಾಹನದ ಮಾಲೀಕನಾಗಿರುತ್ತೇನೆ. ಅದರ ಬಾಡಿಗೆಯಿಂದ ಜೀವನ ನಿರ್ವಹಿಸುತ್ತಿದ್ದೆನೆ. ಸದರಿ ವಾಹನಕ್ಕೆ ಶ್ರೀರಾಂ ಫೈನಾನ್ಸ್‌ನಲ್ಲಿ ₹ 1.5 ಲಕ್ಷ ಸಾಲ ಮಾಡಿರುತ್ತೇನೆ. ವಾಹನವನ್ನು ಮನೆಯ ಪಕ್ಕದಲ್ಲಿ ನಿಲ್ಲಿಸುತ್ತೇನೆ. ದಿ:04–06–2010ರಂದು ವಾಹನವನ್ನು ರಾತ್ರಿ ನಿಲ್ಲಿಸಿದ್ದು ಬೆಳಿಗ್ಗೆ 6–00 ಗಂಟೆಗೆ ನೋಡಲಾಗಿ ವಾಹನ ಸ್ಥಳದಲ್ಲಿ ಇರಲಿಲ್ಲ. ಇದರಿಂದ ವಾಹನ ಕಳುವಾಗಿರಬಹುದೆಂದು ತಿಳಿದುಕೊಂಡಿರುತ್ತೇನೆ. ಸದರಿ ವಾಹನವನ್ನು ಹುಡುಕಲಾಗಿ ಸಿಗದೇ ಪೊಲೀಸ್ ಠಾಣೆಯಲ್ಲಿ ದೂರು ಕೊಟ್ಟಿರುತ್ತೇನೆ. ಅವರು ದೂರು ತೆಗೆದುಕೊಂಡಿರುವುದಿಲ್ಲ. ನಂತರ ಅರಣ್ಯ ಅಧಿಕಾರಿಗಳು ಜಫ್ತು ಮಾಡಿದ ವಿಷಯ ತಿಳಿಯಿತು. ಸದರಿ ವಾಹನವನ್ನು ನನ್ನ ವಶಕ್ಕೆ ನೀಡುವಂತೆ ಅರ್ಜಿ ಸಲ್ಲಿಸಿರುತ್ತೇನೆ. ಅರಣ್ಯ ಇಲಾಖೆಯವರು ಹಾಕಿದ ಪ್ರಥಮ ವರ್ತಮಾನ ವರದಿಯಲ್ಲಿ ಹೇಳಿರುವಂತೆ ಯಾವುದೇ ಅರಣ್ಯ ಉತ್ಪನ್ನದ ಅಕ್ರಮ ಸಾಗಾಣಿಕೆಗೆ ವಾಹನವನ್ನು ಬಳಸಿರುವುದಿಲ್ಲ. ನಾನು ಸದರಿ ಪ್ರಕರಣದಲ್ಲಿ ಭಾಗಿಯಾಗಿರುವುದಿಲ್ಲ. ಈ ಹಿಂದೆ ನನ್ನ ವಿರುದ್ಧವಾಗಲೀ ನನ್ನ ವಾಹನದ ವಿರುದ್ಧವಾಗಲೀ ಯಾವುದೇ ಪ್ರಕರಣ ದಾಖಲಾಗಿರುವುದಿಲ್ಲ. ಸದರಿ ವಾಹನವು ನಮ್ಮ ಜೀವನಾವಶ್ಯಕವಾದ್ದರಿಂದ ಬಿಟ್ಟುಕೊಡಲು ಕೋರುತ್ತೇನೆ.

**ಪಾಟೀ ಸವಾಲು: ಎ.ಪಿ.ಪಿ.ರವರಿಂದ**

ಸದರಿ ವಾಹನಕ್ಕೆ ರಟ್ಟೆಹಳ್ಳಿಯ ಮುಜಿಬುಲ್ಲಾ ಎಂಬುವವನ್ನು ಚಾಲಕನಾಗಿ ನೇಮಿಸಿಕೊಂಡಿದೆ. ನಮ್ಮ ಮನೆ ಎದುರು ಇರುವ ದೇವಸ್ಥಾನದ ಪಕ್ಕದಲ್ಲಿ ವಾಹನವನ್ನು ನಿಲ್ಲಿಸಿರುತ್ತೇನೆ. ದೇವಸ್ಥಾನದ ಅಕ್ಕಪಕ್ಕ ಮನೆಗಳಿರುತ್ತವೆ. ನಮ್ಮ ಸುತ್ತಮುತ್ತ ಮನೆಯವರು ನನಗೆ ಪರಿಚಯಸ್ಥರು. ರಾತ್ರಿ ಹೊತ್ತಿನಲ್ಲಿ ಯಾರೇ ಅಪರಿಚಿತರು ವಾಹನವನ್ನು ಚಾಲನೆ ಮಾಡಿದರೆ ತಿಳಿಯುತ್ತದೆ. ನಾನು ರಟ್ಟೆಹಳ್ಳಿ ಪೋಲೀಸ್ ಠಾಣೆಯಲ್ಲಿ ದೂರು ದಾಖಲಿಸಿದ್ದೆನೆ. ಅವರು ಹಿಂಬರಹ ನೀಡಿಲ್ಲ. ಕೇಸು ದಾಖಲಿಸಿಲ್ಲ. ಆ ದಿನ ನಾನು ರಟ್ಟೆಹಳ್ಳಿ ಪೋಲೀಸ್ ಠಾಣೆಯಲ್ಲಿ ದೂರು ಕೊಟ್ಟಿಲ್ಲ ಎಂದರೆ ಸರಿಯಲ್ಲ. ಆ ದಿನ ಅಕ್ಕಪಕ್ಕದ ಹಳ್ಳಿಯಲ್ಲಿ ವಾಹನದ ಬಗ್ಗೆ ವಿಚಾರಿಸಿರುತ್ತೇನೆ. ಸೊರಬ–ತಲಗದ್ದೆ ನಮ್ಮ ಗ್ರಾಮದಿಂದ ಸುಮಾರು 50 ಕಿ.ಮೀ ದೂರದಲ್ಲಿದೆ. ಆ ದಿನ ರಾತ್ರಿ ನಾನು ನನ್ನ ವಾಹನವನ್ನು ಅಕ್ರಮವಾಗಿ ಸಾಗುವಾನಿ ಸಾಗಿಸಲು ತಲಗದ್ದೆ ರಾಜ್ಯ ಅರಣ್ಯಕ್ಕೆ ಕಳಿಸಿದ್ದೆ ಎಂದರೆ ಸರಿಯಲ್ಲ. ಆ ದಿನ ಸಾಗುವಾನಿ ಸಾಗಿಸುವಾಗ ಅರಣ್ಯಾಧಿಕಾರಿಗಳು ಜಫ್ತು ಮಾಡಿರುವುದು ಗೊತ್ತಿತ್ತು ಎಂದರೆ ಸರಿಯಲ್ಲ. ಆ ದಿನ ನಾನು ಅರಣ್ಯಾಧಿಕಾರಿಗಳಿಗೆ ಭೇಟಿಯಾಗಿದ್ದೆ ಆದರೆ ಯಾವುದೇ ಹೇಳಿಕೆ ಕೊಟ್ಟಿಲ್ಲ. ನಾನು ಪೋಲೀಸ್‌ಗೆ ದೂರು ಕೊಟ್ಟ ವಿಷಯ ಬರವಣಿಗೆಯಲ್ಲಿ ಅರಣ್ಯಾಧಿಕಾರಿಗಳಿಗೆ ಕೊಟ್ಟಿಲ್ಲ. ಆ ದಿನ ನನ್ನ ವಾಹನ ಕಳ್ಳತನವಾಗಿಲ್ಲ. ವಾಹನವನ್ನು ವಶಕ್ಕೆ ಪಡೆಯುವ ಸಲುವಾಗಿ ಸುಳ್ಳು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ.

ಈ ಪ್ರಕರಣದಲ್ಲಿ ಡಿಫೆನ್ಸ್ ಕಡೆ ವಕೀಲರಿಗೆ ವಾದ ಮಂಡಿಸಲು ದಿ:19–11–2011, 31–12–2011, 07–01–2012 ರಂದು ಮೂರು ದಿನಾಂಕಗಳನ್ನು ನೀಡಿದ್ದರೂ ವಾದ ಮಂಡಿಸಿರುವುದಿಲ್ಲ. ಮುಂದಿನ ಕ್ರಮಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:07–01–2012ರಂದು ವಾದಮಂಡಿಸಿ, ಈ ವಾಹನದಲ್ಲಿ ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಆನವಟ್ಟಿ ವಲಯದ ಜಡೆ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಗಳು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯೊಂದಿಗೆ ವಾಹನದ ಮೇಲೆ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಹಾಗೂ ವಲಯ ಅರಣ್ಯಾಧಿಕಾರಿಗಳ ಮುಖಾಂತರ ನ್ಯಾಯಾಲಯಕ್ಕೆ ಎಲ್ಲಾ ದಾಖಲೆಗಳನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ನಿರ್ಧರಿಸ ಬೇಕಾದ ಅಂಶಗಳು ಈ ಕೆಳಗಿನಂತಿದೆ.**

1. ಟಾಟಾಏಸ್ ವಾಹನ ಕೆಎ–27–ಎ–4419 ದಿ:05–06–2010 ರಂದು ಅರಣ್ಯ ಉತ್ಪನ್ನವಾದ ಸಾಗುವಾನಿ ನಾಟಾ 10=0.609ಎಂ3ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಸದರಿ ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಸಾಗುವಾನಿ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:05–06–2010 ರಂದು ಆನವಟ್ಟಿ ವಲಯದ ಜಡೆ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸೊರಬ ತಾ. ಜಡೆ ಹೋಬಳಿ ತುಂಪಿನಕಟ್ಟೆ ಬಳಿ ಕಾಯುತ್ತಿರುವಾಗ ಜಡೆ–ಹೊಸೂರು ಕಾಡಿನ ಮಣ್ಣಿನ ರಸ್ತೆಯಲ್ಲಿ ಒಂದು ವಾಹನ ಕೆಎ–27–ಎ–4419 ರಲ್ಲಿ ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸುತ್ತಿರುವುದನ್ನು ಪತ್ತೆಹಚ್ಚಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಅರಣ್ಯ ಮೊಕದ್ದಮೆ ಸಂ:31/10–11ನ್ನು ಜಡೆ ಶಾಖೆಯ ವನಪಾಲಕರು ದಾಖಲಿಸಿರುತ್ತಾರೆ. ನಂತರ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಿಸಿ, ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಲಿಯಾಕತ್ ಆಲಿ ಬಿನ್ ಇಮಾಮ್‌ಸಾಬ್, ಮಳಗಿ ಗ್ರಾಮ, ರಟ್ಟೆಹಳ್ಳಿ–ಅಂಚೆ, ಹಿರೇಕೆರೂರು ತಾ. ಹಾವೇರಿ ಜಿ. ಇವರು ದಿ:12–07–2010ರಂದು ವಕೀಲರ ಮುಖಾಂತರ ಕ್ಲೇಮು ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)ರ ಪ್ರಕಾರ ಕಾರಣಕೇಳಿ ನೋಟಿಸ್‌ನ್ನು 30 ದಿನಗಳ ಕಾಲವಕಾಶ ನೀಡಿ ದಿ:05–08–2010 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿ ಸ್ವೀಕೃತಿ ಈ ನ್ಯಾಯಾಲಯಕ್ಕೆ ಬಂದಿರುತ್ತದೆ. ನಂತರ ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲಾಗಿದೆ ಮತ್ತು ವಾದಮಂಡಿಸಲು ಮೂರು ಬಾರಿ ದಿನಾಂಕಗಳನ್ನು ನೀಡಲಾಗಿದೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:05–06–2010ರಂದು ಟಾಟಾಏಸ್ ಕೆಎ–27–ಎ–4419 ರಲ್ಲಿ ಸಾಗುವಾನಿ ನಾಟಾ 10=0.609 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಆನವಟ್ಟಿ ವಲಯದ ಜಡೆ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ವಾಹನ ಮತ್ತು ಅರಣ್ಯ ಉತ್ಪನ್ನದೊಂದಿಗೆ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಈ ಪ್ರಕರಣದ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಈ ಪ್ರಕರಣದ ಮೇಲಿನ ವಾಸ್ತುವಾಂಶ ಹಾಗೂ ಬಾದ್ಯತೆದಾರರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲೆಗಳ ಪ್ರಕಾರ, ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುಕ್ಕಾಗಾಲೀ, ಅಲ್ಲದೇ

ಈ ಪ್ರಕರಣದಲ್ಲಿ ಆರ್.ಸಿ. ಮಾಲೀಕರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚೆರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವಾನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುತ್ತಾರೆ.

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ……………………………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕರಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

ಅಂಶ–4:

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**–:: ಆದೇಶ ::–**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಜಪ್ತು ಮಾಡಿದ ಟಾಟಾಏಸ್ ಕೆಎ–27–ಎ–4419 ವಾಹನವನ್ನು (ಇಂಜಿನ್ ನಂ: F-8-BIN-382485, ಛಾಸ್ಸಿಸ್ ನಂಬರ್: XMA-3EVB-IIX-00869235-X-G7) ಮತ್ತು ಈ ವಾಹನದಲ್ಲಿದ್ದ ಕರ್ನಾಟಕ ಸರ್ಕಾರದ ಸಂಪತ್ತು ಆದ ಸಾಗುವಾನಿ ನಾಟಾ 10=0.609ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:24–03–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ**
**ಸಾಗರ ವಿಭಾಗ, ಸಾಗರ.**

**ಪಿ.ಆರ್. ನಂ. 545**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3: ಅಮೊ:ವಾಹನ:ವಿವ:05/11–12, ದಿನಾಂಕ: 24–03–2012**

**ಉಪಸ್ಥಿತರು** :: ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** :: ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** :: ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:–**

ದಿ:29–06–2011 ರಂದು ಸ್ವರಾಜ್ ಮಜ್ದಾ ಕೆಎ–20–ಎ–1808ರಲ್ಲಿ ಬೀಟೆ ನಾಟಾವನ್ನು ಅಕ್ರಮ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಹೊಸನಗರ ವಲಯ ರಿಪ್ಪನ್‌ಪೇಟೆ ಶಾಖೆಯ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:29–06–2011 ರಂದು ಹೊಸನಗರ ವಲಯದ ರಿಪ್ಪನ್‌ಪೇಟೆ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಹೊಸನಗರ ತಾಲ್ಲೂಕು ಹುಂಚಾ ಹೋಬಳಿ ಜಂಬಹಳ್ಳಿ ಗ್ರಾಮದ ಕೆರೆಗೋಡುನಿಂದ ಸುಣ್ಣದಬಸ್ತಿಗೆ ಬರುವ ಜಲ್ಲಿಕಲ್ಲಿನ ರಸ್ತೆಯಲ್ಲಿ ಗಸ್ತು ತಿರುಗುತ್ತಾ ಬರುತ್ತಿರುವಾಗ ಬೆಳಗ್ಗಿನ ಜಾವ 5–30ರ ಸಮಯದಲ್ಲಿ ಒಂದು ಲಾರಿ ಕೆರೆಗೋಡು ಕಡೆಯಿಂದ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಲಾರಿಯನ್ನು ನಿಲ್ಲಿಸಿದರು. ನಂತರ ಲಾರಿಯನ್ನು ಪರಿಶೀಲಿಸಿ ನೋಡಲಾಗಿ ಅದರಲ್ಲಿ ಎರಡು ಜನ ಆಸಾಮಿಗಳಿದ್ದರು. ಅವರಲ್ಲಿ ಒಬ್ಬನು ಲಾರಿಯಿಂದ ಇಳಿದು ಓಡುತ್ತಿರುವಾಗ ಇಲಾಖೆಯವರು ಬೆನ್ನಟ್ಟಿದರು ಕೈಗೆ ಸಿಗದೇ ಪರಾರಿಯಾದನು. ಚಾಲಕನು ಲಾರಿಯಲ್ಲಿ ಕುಳಿತಿದ್ದನು. ಸದರಿ ಲಾರಿಯನ್ನು ಪರಿಶೀಲಿಸಿ ನೋಡಲಾಗಿ ನಂ:ಕೆಎ–20–ಎ–1808 (ಇಂಜಿನ್ ನಂ:543JQ55671, ಛಾಸಿಸ್ಸ್ ನಂ: QJWEL4GM0062926) ಆಗಿದ್ದು, ಲಾರಿ ಬಾಡಿಯೊಳಗಡೆ ಪರಿಶೀಲಿಸಿದಾಗ 05 ಬೀಟೆ ನಾಟಾವಿದ್ದು, ಅವುಗಳನ್ನು ಅಳತೆ ಮಾಡಲಾಗಿ 1.145 ಎಂ3 ಪ್ರಮಾಣವಿರುತ್ತದೆ. ಈ ನಾಟಾಗಳಿಗೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ. ಮತ್ತು ಈ ನಾಟಾಗಳನ್ನು ಕೈಗರಗಸದಿಂದ ಕೊಯ್ತು ಮಾಡಿದಾಗಿದ್ದು, ವಾಹನ ಚಾಲಕನ ವಿಳಾಸ ಕೇಳಿದಾಗ ಮಹಮದ್ ಶರೀಫ್ ಬಿನ್ ಇಬ್ರಾಹಿಂ, 28 ವರ್ಷ, ತೊಡಾರು ವಾಸಿ, ಮೂಡಬಿದ್ರೆ ಮಂಗಳೂರು ತಾ. ದಕ್ಷಿಣಕನ್ನಡ ಜಿಲ್ಲೆ ಎಂದು ತಿಳಿಸಿದನು. ಮತ್ತು ಓಡಿ ಹೋದವನ ಹೆಸರು ವಿಚಾರಿಸಲಾಗಿ ಓಡಿಹೋದವನ ಹೆಸರು ಧನಂಜಯ ಬಿನ್ ಸವಣ್ಣಪ್ಪ, 36 ವರ್ಷ, ಈಸೂರು ಗ್ರಾಮ, ಶಿಕಾರಿಪುರ ತಾ. ಎಂದು ತಿಳಿಸಿದನು. ಸದರಿ ಬೀಟೆ ನಾಟಾ ಸಾಗಿಸಲು ಸಿಕ್ಕಿಬಿದ್ದ ಚಾಲಕನ ಹತ್ತಿರ ರಹದಾರಿ ಕೇಳಲಾಗಿ ಯಾವುದೇ ರಹದಾರಿ ಇಲ್ಲವೆಂದು, ಓಡಿಹೋದ ಆಸಾಮಿಯು ಲಾರಿ ತರಲು ಹೇಳಿದರಿಂದ ಮೂಡುಬಿದ್ರೆಯಿಂದ ಲಾರಿ ತಂದು ಬೀಟೆ ನಾಟಾ ತುಂಬಿರುವುದಾಗಿ ತಿಳಿಸಿದನು. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಲಾರಿ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತಿ ವರದಿಯೊಂದಿಗೆ ಇಲಾಖಾ ಪರ ಜಪ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವನಪಾಲಕರು ಅರಣ್ಯ ಮೊಕದ್ದಮೆ ಸಂಖ್ಯೆ:19/11–12ನ್ನು ದಾಖಲಿಸಿರುತ್ತಾರೆ. ನಂತರ ವಾಹನವನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಸದರಿ ವಾಹನವನ್ನು ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಉಡುಪಿ ಇವರಿಗೆ ಬಿ3–ಅಮೊ–ವಾಹನ–ವಿವ–05/11–12 ದಿ:02–07–2011 ರಂದು ಪತ್ರ ಬರೆದು ಕೋರಲಾಗಿತ್ತು. ಅದರಂತೆ, ಸಾರಿಗೆ ಅಧಿಕಾರಿ, ಉಡುಪಿ ಇವರು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ದಿ:17–08–2011 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಸಿ.ಸಿ.ಯನ್ನು ದಿ:03–05–2011 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರಿಗೆ ವರ್ಗಾಯಿಸಿದ ಬಗ್ಗೆ ನಮೂದಿಸಿರುತ್ತಾರೆ. ಅದರಂತೆ ಸಾರಿಗೆ ಅಧಿಕಾರಿ, ಮಂಗಳೂರು ಇವರಿಗೆ ದಿ: 12–10–2011ರಂದು ಪತ್ರ ಬರೆದು 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಒದಗಿಸಲು ಕೋರಲಾಯಿತು. ಸಾರಿಗೆ ಅಧಿಕಾರಿ, ಮಂಗಳೂರು ಇವರು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ದಿ:28–10–2011ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಆರ್.ಸಿ.ಮಾಲೀಕರ ಹೆಸರು ಶ್ರೀ ಮಹಮದ್ ಶರೀಫ್ ಬಿನ್ ಇಬ್ರಾಹಿಂ, ತೋಡಾರ್ ಹಿದಾಯತ್ ನಗರ, ರೇಷ್ಮಾ–ಮಂಜಿಲ್–ಅಂಚೆ, ಮಂಗಳೂರು ಇವರ ಹೆಸರಿಗೆ ನೊಂದಣಿಯಾಗಿರುತ್ತದೆ. "ಜಪ್ತಾದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ? ಎನ್ನುವ ಬಗ್ಗೆ ಆರ್.ಸಿ. ಮಾಲೀಕರ ಹೇಳಿಕೆಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು 30 ದಿನಗಳ ಕಾಲಾವಕಾಶ ನೀಡಿ ದಿ:19–12–2011ರಂದು ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(I)ರ ಪ್ರಕಾರ ನೋಟಿಸ್‌ನ್ನು ಜಾರಿ ಮಾಡಿದೆ. ಜಾರಿ ಮಾಡಿದ ನೋಟಿಸ್‌ನ ಲಕೋಟೆ ಮೇಲೆ "Not claimed" ಎಂದು ಅಂಚೆ ಇಲಾಖೆಯವರು ನಮೂದಿಸಿ, ಈ ನ್ಯಾಯಾಲಯಕ್ಕೆ ಹಿಂದಿರುಗಿಸಿರುತ್ತಾರೆ. ಇದರಿಂದ ಆರ್.ಸಿ. ಮಾಲೀಕರು ಈ ವಾಹನದ ಪ್ರಕರಣದ ವಿಚಾರಣೆಗೆ ಹಾಜರಾಗಲು ಆಸಕ್ತಿ ಇಲ್ಲವೆಂದು ತೀರ್ಮಾನಿಸಿ ಮುಂದಿನ ಕ್ರಮಕೈಗೊಳ್ಳಲಾಯಿತು."

ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಈ ಪ್ರಕರಣದ ವಿಚಾರಣಾ ವರದಿ ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ:ಬಿ3:ಅಮೊ:ವಾಹನ:ಸಿಆರ್:16/11–12ದಿ:29–07–2011ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ದಿ:09–08–2011ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:27–10–2011ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–03–2012ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವನಪಾಲಕ ರಿಪ್ಪನ್‌ಪೇಟೆ ಶಾಖೆ ಇವರು ಪತ್ತೆಹಚ್ಚಿ ಇಲಾಖಾ ಪರ ವಶಪಡಿಸಿಕೊಂಡು ಕ್ರಿಮಿನಲ್

ಕೇಸ್‌ನ್ನು ದಾಖಲಿಸಿರುತ್ತಾರೆ. ನಂತರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿ ಮತ್ತು ವಾಹನವನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ನಿರ್ಧರಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.**

4. ಸ್ವರಾಜ್ ಮಜ್ಡಾ ವಾಹನ ಕೆಎ–20–ಎ–1808 ರಲ್ಲಿ ಅರಣ್ಯ ಉತ್ಪನ್ನವಾದ ಬೀಟೆ ನಾಟಾ 08=1.145 ಎಂ3ನ್ನು ದಿ:29–06–2011 ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

5. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

6. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಸದರಿ ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಈ ಕೆಳಗಿನಂತೆ ವಿವರಿಸಿದೆ.

**ಅಂಶ–1:**

ದಿ: 29–06–2011ರಂದು ಹೊಸನಗರ ವಲಯದ ರಿಪ್ಪನ್‌ಪೇಟೆಯ ವನಪಾಲಕ ಮತ್ತು ಸಿಬ್ಬಂದಿಯವರು ಹೊಸನಗರ ತಾ. ಹುಂಚ ಹೋಬಳಿ ಜಂಬಳ್ಳಿ ಗ್ರಾಮದ ಸ.ನಂ. 43ರ ಕೆರೆಕೋಡಿನಿಂದ ಸುಣ್ಣದಬಸ್ತಿ ಬಸ್‌ನಿಲ್ದಾಣಕ್ಕೆ ಹೋಗುವ ಜಲ್ಲಿ ರಸ್ತೆಯಲ್ಲಿ ಗಸ್ತು ತಿರುಗುತ್ತಿರುವಾಗ ಬೆಳಿಗ್ಗೆ ಸುಮಾರು 6–15 ಗಂಟೆ ಸಮಯದಲ್ಲಿ ಸ್ವರಾಜ್ ಮಜ್ಡಾ ಕೆಎ–20–ಎ–1808 ರಲ್ಲಿ ಬೀಟೆ ನಾಟಾ 08=1.145 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿರುವ ಬಗ್ಗೆ ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ವನಪಾಲಕರು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರಿಗೆ ಸಲ್ಲಿಸಿರುತ್ತಾರೆ. ನಂತರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಸದರಿ ದಾಖಲೆಗಳೊಂದಿಗೆ ವಾಹನ ಮತ್ತು ಬೀಟೆ ನಾಟಾವನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:19–12–2011ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಹಾಗೂ ಸ್ವೀಕೃತಿ ಈ ನ್ಯಾಯಾಲಯಕ್ಕೆ ಬಂದಿದೆ. ಸದರಿ ನೋಟಿಸ್‌ನ್ನು ಆರ್.ಸಿ. ಮಾಲೀಕರು ಪಡೆದು 30 ದಿನಗಳಾದರೂ ಈ ನ್ಯಾಯಾಲಯಕ್ಕೆ ವಾಹನ ಬಿಡಿಸಿಕೊಳ್ಳುವ ಬಗ್ಗೆ ಯಾವುದೇ ಅರ್ಜಿ ಸಲ್ಲಿಸಿರುವುದಿಲ್ಲ. ಹಾಗೂ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 29–07–2011 ರಂದು ಪ್ರಕಟಣೆ ಹೊರಡಿಸಿರುತ್ತದೆ. ಸದರಿ ಪ್ರಕಟಣೆಯು ದಿ:09–08–2011ರಂದು ವಿಜಯಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:27–10–2011 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಆದರೂ ಸಹ ಆರ್.ಸಿ. ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ವಾಹನ ಬಿಡಿಸಿಕೊಳ್ಳುವ ಬಗ್ಗೆ ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಸೂಕ್ತ ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:29–06–2011 ರಂದು ಸ್ವರಾಜ್ ಮಜ್ದಾ ಕೆಎ–20–ಎ–1808 ರಲ್ಲಿ ಬೀಟೆ ನಾಟಾ 08=1.145 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಹೊಸನಗರ ವಲಯದ ರಿಪ್ಪನ್‌ಪೇಟೆ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರಿಗೆ ಸಲ್ಲಿಸಿದ್ದು ನಂತರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಈ ದಾಖಲೆಗಳೊಂದಿಗೆ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ.

ಆದರೆ, ಬೀಟೆ ನಾಟಾ ಅಕ್ರಮವಾಗಿ ದಿ:29–06–2011 ರಂದು ಸಾಗಿಸಿದ ಸಮಯದಲ್ಲಿ ಸದರಿ ವಾಹನವು ಶ್ರೀ ಮಹಮದ್ ಶರೀಫ್ ಬಿನ್ ಇಬ್ರಾಹಿಂ, ತೋಡಾರ್ ಹಿದಾಯತ್ ನಗರ, ರೇಷ್ಮಾ–ಮಂಜಿಲ್–ಅಂಚೆ, ಮಂಗಳೂರು ಇವರಿಗೆ ಇವರ ಹೆಸರಿನಲ್ಲಿ ನೊಂದಣಿಯಾಗಿರುತ್ತದೆ.ಆದ್ದರಿಂದ ಇವರನ್ನೇ ಸದರಿ ವಾಹನದ ಮಾಲೀಕರೆಂದು ಪರಿಗಣಿಸಲಾಗಿದೆ. ಅಲ್ಲದೇ ಆರ್.ಸಿ. ಮಾಲೀಕರು ಮುಗ್ಧರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಈ ಪ್ರಕರಣದಲ್ಲಿ ಆರ್.ಸಿ. ಮಾಲೀಕರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚೆರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ……………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕರಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ, ನಾನು ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ಸ್ವರಾಜ್ ಮಜ್ದಾ ಕೆಎ–20–ಎ–1808 ರಲ್ಲಿ (ಇಂಜಿನ್ ನಂ:543JQ55671, ಛಾಸಿಸ್ಸ್ ನಂ: QJWEL4GM0062926) ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 08=1.145 ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:24–03–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ,**
**ಸಾಗರ ವಿಭಾಗ, ಸಾಗರ.**

**ಪಿ.ಆರ್. ನಂ. 544**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ

**ಕ್ರ: ಬಿ3: ಅಮೊ:ವಾಹನ:ವಿವ:07/10–11, ದಿನಾಂಕ:31–03–2012**

**ಉಪಸ್ಥಿತರು** : ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** : ಯಾರು ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:–**

ದಿ:12–07–2011 ರಂದು ಒಂದು ವಾಹನ ಮಾರುತಿ ವ್ಯಾನ್ ಜಿಎ–08–ಇ–3738 ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿವಾಗ ಉಳ್ಳೂರು ಶಾಖೆ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ವಿವರ ಈ ಕೆಳಗಿನಂತಿದೆ.

ದಿ:12–07–2011 ರಂದು ಸಾಗರ ವಲಯದ ಉಳ್ಳೂರು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾ. ಕಸಬಾ ಹೋಬಳಿ ಕಲ್ಕೊಪ್ಪ ಮೀಸಲು ಅರಣ್ಯದ ಪಕ್ಕ ಶಿವಮೊಗ್ಗದಿಂದ ಸಾಗರಕ್ಕೆ ಹೋಗುವ ರಸ್ತೆಯಲ್ಲಿ ಕಾಯುತ್ತಿರುವಾಗ ಸಂಜೆ ಸುಮಾರು 7–00 ಗಂಟೆ ಸಮಯದಲ್ಲಿ ಒಂದು ಮಾರುತಿ ವ್ಯಾನ್ ಬರುತ್ತಿರುವುದನ್ನು ತಡೆದು ನಿಲ್ಲಿಸಲು ಸೂಚಿಸಿದರು. ಆದರೆ, ಸದರಿ ವಾಹನ ನಿಲ್ಲಿಸದೇ ಚಾಲಕನು ಬಾಳೆಗುಂಡಿ ಕಡೆಗೆ ವಾಹನ ತಿರುಗಿಸಿ ಸುಮಾರು 50 ಮೀಟರ್ ದೂರ ಚಾಲನೆ ಮಾಡಿ ವಾಹನ ನಿಲ್ಲಿಸಿ ವಾಹನದಲ್ಲಿದ್ದ ಆಸಾಮಿಗಳು ಕೈಗೆ ಸಿಗದೇ ಪರಾರಿಯಾದರು. ವಾಹನದೊಳಗೆ ಪರಿಶೀಲಿಸಿದಾಗ ಬೀಟೆ ಜಾತಿಯ ನಾಟಾಗಳು ಇದ್ದವು. ಸದರಿ ಬೀಟೆ ನಾಟಾಗಳಿಗೆ ಇಲಾಖೆಯ ಯಾವುದೇ ಛಾಪಾದ ಗುರುತುಗಳಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಲಾಯಿತು. ವಾಹನ ಮಾರುತಿ ವ್ಯಾನ್ ಜಿಎ–08–ಇ–3738, ಛಾಸ್ಸಿಸ್ ನಂ: ST-91-IN-349164, ಇಂಜಿನ್ ನಂ: ಕಂಡುಬಂದಿರುವುದಿಲ್ಲ. ಈ ವಾಹನದಲ್ಲಿದ್ದ 08 ಬೀಟೆ ನಾಟಾಗಳನ್ನು ಅಳತೆ ಮಾಡಲಾಗಿ ಒಟ್ಟು 0.263 ಎಂ3 ಪ್ರಮಾಣವಿರುತ್ತದೆ. ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅ.ಮೊ.ಸಂಖ್ಯೆ 30/11–12ನ್ನು ವನಪಾಲಕರು ದಾಖಲಿಸಿರುತ್ತಾರೆ. ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವನಪಾಲಕರು ವಲಯ ಅರಣ್ಯಾಧಿಕಾರಿ ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ ಸಾಗರ ಇವರು ಈ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–06/11–12 ದಿ:14–07–2011 ರಂದು The Director of Transport Commissioner, Panaji-Goa ಇವರಿಗೆ ಪತ್ರ ಬರೆದು ಕೋರಲಾಯಿತು. ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ದಿ:22–08–2011 ರಂದು The Director of Transport Commissioner, Panaji-Goa ಇವರು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟನಲ್ಲಿ ಆರ್.ಸಿ. ಮಾಲೀಕರ ಹೆಸರು ವಿಳಾಸ ಈ ರೀತಿ ಇರುತ್ತದೆ. "Sri. Samir Naik S/O Premnath Naik, H.No. 459, Orel Assolna, Salcete Goa." ಆರ್.ಸಿ. ಮಾಲೀಕರಿಗೆ ಈ ನ್ಯಾಯಾಲಯದಿಂದ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(I)ರ ಪ್ರಕಾರ ನೋಟಿಸ್‌ನ್ನು ದಿ:18–10–2011 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಲಕೋಟೆ ಮೇಲೆ ಅಂಚೆ ಇಲಾಖೆಯವರು "Unclaimed" ಎಂದು ನಮೂದಿಸಿ ಈ ನ್ಯಾಯಾಲಯಕ್ಕೆ ಹಿಂದಿರುಗಿಸಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–16/11–12 ದಿ:29–07–2011 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ: 09–08–2011ರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:27–10–2011 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಕ್ಲೇಮು ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಜಿಎ–08–ಇ–3738 (ಛಾಸಿಸ್ಸ್ ನಂ: ST-91-IN-349164, ಇಂಜಿನ್ ನಂ: ಕಂಡುಬಂದಿರುವುದಿಲ್ಲ) ಮತ್ತು ಈ ವಾಹನದಲ್ಲಿದ್ದ, 09 ತುಂಡು ಬೀಟೆ 0.265 ಎಂ3ವು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:31–03–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ,**
**ಸಾಗರ ವಿಭಾಗ, ಸಾಗರ**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ**

**ಕ್ರ: ಬಿ3: ಅಮೊ:ವಾಹನ:ವಿವ:06/11–12, ದಿನಾಂಕ:31–03–2012**

**ಉಪಸ್ಥಿತರು** : ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** : ಯಾರು ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:–**

ದಿ:10–07–2011 ರಂದು ಒಂದು ವಾಹನ ಮಾರುತಿ ವ್ಯಾನ್ ಜಿಎ–01–ಇ–0109ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿವಾಗ ತ್ಯಾಗರ್ತಿ ಶಾಖೆ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ವಿವರ ಈ ಕೆಳಗಿನಂತಿದೆ.

ದಿ:09–07–2011 ರಂದು ಸಾಗರ ವಲಯದ ತ್ಯಾಗರ್ತಿ ಶಾಖೆ ವನಪಾಲಕ ಮತ್ತು ಸಿಬ್ಬಂದಿಯವರು ಸಾಗರ ತಾ. ಆನಂದಪುರಂ ಹೋಬಳಿ ತ್ಯಾಗರ್ತಿ ಗ್ರಾಮದ ಶಿರಾಳಕೊಪ್ಪಕ್ಕೆ ಹೋಗುವ ರಸ್ತೆಯಲ್ಲಿ ಕಾಯುತ್ತಿರುವಾಗ ಸುಮಾರು ರಾತ್ರಿ 12–30ರ ಸಮಯದಲ್ಲಿ ಬೆಳಂದೂರು ರಸ್ತೆ ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನ ಸಹಾಯದಿಂದ ನಿಲ್ಲಿಸಲು ಸೂಚಿಸಿದರು. ಆ ವಾಹನ ಸ್ವಲ್ಪ ದೂರ ಚಲಿಸಿದ ನಂತರ ವಾಹನ ನಿಲ್ಲಿಸಿ ವಾಹನದಲ್ಲಿದ್ದ ಆಸಾಮಿಗಳು ವಾಹನದಿಂದ ಇಳಿದು ಕತ್ತಲೆಯಲ್ಲಿ ಕಾಡಿನೊಳಗೆ ಓಡಿ ಪರಾರಿಯಾದರು. ಓಡಿ ಹೋದವರು ಯಾರೆಂದು ತಿಳಿದುಬಂದಿರುವುದಿಲ್ಲ. ವಾಹನ ಪರಿಶೀಲಿಸಲಾಗಿ ಮಾರುತಿ ವ್ಯಾನ್ ಜಿಎ–01–ಇ–0109, ಛಾಸ್ಸಿಸ್ ನಂ: ST–91–IN–134403, ಇಂಜಿನ್ ನಂ: F8-BIN-1246969 ಆಗಿರುತ್ತದೆ. ವಾಹನದೊಳಗಡೆ ಬೀಟೆ ಜಾತಿಯ 05 ತುಂಡುಗಳಿರುತ್ತದೆ. ಈ ತುಂಡುಗಳ ಮೇಲೆ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ಇದನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅ.ಮೊ.ಸಂಖ್ಯೆ 29/11–12ನ್ನು ವನಪಾಲಕರು ದಾಖಲಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರು ಈ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–06/11–12 ದಿ:14–07–2011 ರಂದು The Director of Transport Commissioner, Panaji-Goa ಇವರಿಗೆ ಪತ್ರ ಬರೆದು ಕೋರಲಾಯಿತು. ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ದಿ:12–08–2011 ರಂದು The Director of Transport Commissioner, Panaji-Goa ಇವರು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟನಲ್ಲಿ ಆರ್.ಸಿ. ಮಾಲೀಕರ ಹೆಸರು ವಿಳಾಸ ಈ ರೀತಿ ಇರುತ್ತದೆ. Sri. Shivarj Sinai Bhangui, H.No. 508, Mapa Panchawadi, Ponda Goa. ಎಂದಿರುತ್ತದೆ. ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(i)ರ ಪ್ರಕಾರ ಆರ್.ಸಿ. ಮಾಲೀಕರಿಗೆ ಈ

ನ್ಯಾಯಾಲಯದಿಂದ ನೋಟಿಸ್‌ನ್ನು ದಿ:17–10–2011 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಲಕೋಟೆ ಮೇಲೆ ಅಂಚೆ ಇಲಾಖೆಯವರು " Address Left " ಎಂದು ನಮೂದಿಸಿ ಈ ನ್ಯಾಯಾಲಯಕ್ಕೆ ಹಿಂದಿರುಗಿಸಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–16/11–12 ದಿ:29–07–2011 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:09–08–2011ರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:27–10–2011 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನ ಬಿಡಿಸಿಕೊಳ್ಳಲು ವಾಹನ ಮಾಲೀಕರಿಗೆ ಆಸಕ್ತಿ ಇಲ್ಲವೆಂದು ತೀರ್ಮಾನಸಲಾಯಿತು. ಹಾಗೇ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಜಿಎ–01–ಇ–0109 (ಛಾಸ್ಸಿಸ್ ನಂ: ST-91-IN-134403, ಇಂಜಿನ್ ನಂ: F8-BIN-1246969) ಮತ್ತು ಈ ವಾಹನದಲ್ಲಿದ್ದ, 05 ತುಂಡು ಬೀಟೆ 0.319 ಎಂ3ನ್ನು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:31–03–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ,**
**ಸಾಗರ ವಿಭಾಗ, ಸಾಗರ**

ಪಿ.ಆರ್. ನಂ. 546

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ**

**ಕ್ರ: ಬಿ3: ಅಮೊ:ವಾಹನ:ವಿವ:24/2010–11, ದಿನಾಂಕ:24–03–2012**

| | | |
|---|---|---|
| **ಉಪಸ್ಥಿತರು** | : | ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | : | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಬಾಧ್ಯತೆದಾರರು** | : | ಯಾರು ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:–**

ದಿ:15–11–2010 ರಂದು ಒಂದು ವಾಹನ ಮಹೇಂದ್ರ ಪಿಕ್‌ಅಪ್ ಎಪಿ–05–ವಿ–5360ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿವಾಗ ವನಪಾಲಕ ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಪತ್ತೆಹಚ್ಚಿ ಬರೆದ ಮಹಜರ್ ವಿವರ ಈ ಕೆಳಗಿನಂತಿದೆ.

ದಿ:15–11–2010 ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರ ನಿರ್ದೇಶನದಂತೆ ಅರಣ್ಯ ಸಂಚಾರಿದಳ ಸಿಬ್ಬಂದಿ ಮತ್ತು ಅಂಬ್ಲಿಗೊಳ ವಲಯದ ಸಿಬ್ಬಂದಿಯವರು ಶಿಕಾರಿಪುರ ತಾ. ಅಂಜನಾಪುರ ಹೋಬಳಿ ಈಸೂರು ಗ್ರಾಮದ ಈಸೂರಿಗೆ ಹೋಗುವ ಜೆಲ್ಲಿ ರಸ್ತೆಯಲ್ಲಿ ಗಸ್ತು ತಿರುಗುತ್ತಿರುವಾಗ ಒಂದು ಮಹೇಂದ್ರ ಪಿಕ್‌ಅಫ್ ಸುಮಾರು ಬೆಳಿಗ್ಗೆ 10–30ರ ಸಮಯದಲ್ಲಿ ಹಿಂದುಗಡೆಯ ಒಂದು ಚಕ್ರವಿಲ್ಲದೆ ಡಿಸ್ಕ ಸಹಾಯದಿಂದ ನಿಲ್ಲಿಸಲಾಗಿತ್ತು. ಈ ವಾಹನದ ಬಾಡಿಯೊಳಗೆ ಹಸಿಯಾದ 03 ಬೀಟೆ ನಾಟಾವಿತ್ತು. ಈ ನಾಟಾಗಳ ಮೇಲೆ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ಹಾಗೂ ವಾಹನದ ಹತ್ತಿರ ಯಾರು ಇರಲಿಲ್ಲ. ಬೀಟೆ ನಾಟಾ ಅಳತೆ ಮಾಡಿದಾಗ 0.670 ಎಂ3 ಪ್ರಮಾಣವಿರುತ್ತದೆ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 71(ಎ), 104(ಎ) ಮತ್ತು ಕರ್ನಾಟಕ

ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅ.ಮೊ.ಸಂಖ್ಯೆ 51/10–11ನ್ನು ವನಪಾಲಕರು ದಾಖಲಿಸಿ ದಾಖಲೆಗಳೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನ ಸಮೇತ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಈ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾಧಿಕಾರಿಯಾದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಆರ್.ಸಿ. ಮಾಲೀಕರ ವಿವರವನ್ನು ಟ್ರಾನ್ಸ್‌ಪೋರ್ಟ್ ಕಮೀಷನರ್, ಆಂಧ್ರಪ್ರದೇಶ ರಾಜ್ಯದಿಂದ ಪಡೆದಿರುತ್ತಾರೆ. ಈ ವಾಹನದ ಆರ್.ಸಿ. ಮಾಲೀಕರಾದ ಶ್ರೀ ಅಬೂಬುಕ್ಕರ್ ಬಿನ್ ತಂಬಿಇದ್ದಿನಬ್ಬ, ಬಡಗ ಉಳೆಪಾಡಿ ಮಂಗಳೂರು ಇವರಿಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(I)ರ ಪ್ರಕಾರ ನೋಟಿಸ್‌ನ್ನು ದಿ:14–12–2010 ರಂದು ಜಾರಿ ಮಾಡಿರುತ್ತಾರೆ. ಇವರು ನೋಟಿಸ್‌ಗೆ ಈ ಕೆಳಗಿನಂತೆ ಉತ್ತರ ನೀಡಿರುತ್ತಾರೆ. ಈ ವಾಹನವನ್ನು ದಿ:13–11–2010 ರಂದು ಪಿ.ಇಬ್ರಾಹಿಂ, ಕಾಶೀಪಟ್ಟಣ–ಅಂಚೆ, ಬೆಳ್ತಂಗಡಿ ತಾ. ಇವರಿಗೆ ಮಾರಾಟ ಮಾಡಿದ್ದೇನೆಂದು. ಮತ್ತು ಅವರಿಗೆ ಕೊಟ್ಟ ಬಗ್ಗೆ ಡಿಲವರಿ ನೋಟ್ ಜೆರಾಕ್ಸ್ ಪ್ರತಿ ಉತ್ತರದ ಜೊತೆ ಸಲ್ಲಿಸಿರುತ್ತಾರೆ. ಮತ್ತು ಈ ವಾಹನಕ್ಕೆ ₹ 2.50 ಲಕ್ಷವು ಶ್ರೀರಾಮ್ ಪೈನಾನ್ಸ್‌ನಲ್ಲಿ ಸಾಲವಿರುತ್ತದೆಂದು ಅದರಲ್ಲಿ ರೂ. 2.30 ಲಕ್ಷವನ್ನು ಇಬ್ರಾಹಿಂರವರು ತೀರಿಸುವುದಾಗಿ ಕರಾರು ಮಾಡಿರುತ್ತಾರೆಂದು ಮತ್ತು ಇಬ್ರಾಹಿಂನ ಮೇಲೆ ಸೂಕ್ತ ಕಾನೂನು ಕ್ರಮ ಜರುಗಿಸಲು ಕೋರಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–29/10–11 ದಿ:14–12–2010 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:21–12–2010ರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:13–01–2011 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಕ್ಲೇಮು ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–03–2012 ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಅರಣ್ಯ ಸಂಚಾರಿದಳ, ಶಿಕಾರಿಪುರದ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ನಿರ್ಧರಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.**

1. ಮಹೇಂದ್ರ ಪಿಕ್‌ಅಪ್ ವಾಹನ ಎಪಿ–05–ವಿ–5360 ರಲ್ಲಿ ಅರಣ್ಯ ಉತ್ಪನ್ನವಾದ ಬೀಟೆ ನಾಟಾ 03=0.670 ಎಂ3ನ್ನು ದಿ:15–11–2010 ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಸದರಿ ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?
4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಈ ಕೆಳಗಿನಂತೆ ವಿವರಿಸಿದೆ.

**ಅಂಶ–1:**

ದಿ:15–11–2011 ರಂದು ಅರಣ್ಯ ಸಂಚಾರಿದಳ, ಶಿಕಾರಿಪುರ ವನಪಾಲಕ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾ. ಅಂಜನಾಪುರ ಹೋಬಳಿ ಈಸೂರು ಹೋಗುವ ಜಲ್ಲಿ ರಸ್ತೆಯಲ್ಲಿ ಗಸ್ತು ತಿರುಗುತ್ತಿರುವಾಗ ಬೆಳಿಗ್ಗೆ ಸುಮಾರು 10–00 ಗಂಟೆ ಸಮಯದಲ್ಲಿ ಮಹೇಂದ್ರ ಪಿಕ್‌ಅಪ್ ಎಪಿ–05–ವಿ–5360ರಲ್ಲಿ ಬೀಟೆ ನಾಟಾ 03=0.670 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿರುವ ಬಗ್ಗೆ ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ವನಪಾಲಕರು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರಿಗೆ ಸಲ್ಲಿಸಿರುತ್ತಾರೆ. ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಸದರಿ ದಾಖಲೆಗಳೊಂದಿಗೆ ವಾಹನ ಮತ್ತು ಬೀಟೆ ನಾಟಾವನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ: 05–07–2011 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಹಾಗೂ ಸ್ವೀಕೃತಿ ಈ ನ್ಯಾಯಾಲಯಕ್ಕೆ ಬಂದಿದೆ. ಆರ್.ಸಿ. ಮಾಲೀಕರಾದ ಶ್ರೀ ಎಂ.ಅಬುಬಕರ್ ಬಿನ್ ಇದ್ದಿನಬ್ಬ, ಎಂ.ಎಸ್. ಕೌಂಪೌಂಡ್ ಗಾಂಧಿನಗರ, ಗಂಜಿ ಮಠ ಅಂಚೆ, ಮಂಗಳೂರು ತಾ. ಇವರು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ, ಈ ವಾಹನವನ್ನು ಶ್ರೀ ಇಬ್ರಾಹಿಂ ಬಿನ್ ಯಾಸೂಬ್, ಮುಗ್ಗುತೋಡಿ ವಾಸಿ, ಕಾಶಿಪಟ್ಟಣ ಅಂಚೆ, ಬೆಳ್ತಂಗಡಿ ತಾ. ಇವರಿಗೆ ಈ ವಾಹನವನ್ನು ಮಾರಾಟಾ ಮಾಡಿದ್ದೇನೆಂದು, ಮತ್ತು ಈ ವಾಹನದ ಮೇಲೆ ಸೂಕ್ತ ಆದೇಶ ಹೊರಡಿಸಲು ಕೋರಿರುತ್ತಾರೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಸೂಕ್ತ ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ: 15–11–2011 ರಂದು ಮಹೇಂದ್ರ ಪಿಕ್‌ಅಪ್ ಎಪಿ–05–ಬಿ–5360ರಲ್ಲಿ ಬೀಟೆ ನಾಟಾ 03=0.670 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಅರಣ್ಯ ಸಂಚಾರಿದಳ, ಶಿಕಾರಿಪುರ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರಿಗೆ ಸಲ್ಲಿಸಿದ್ದು ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಈ ದಾಖಲೆಗಳೊಂದಿಗೆ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ.

**ಆರ್.ಸಿ. ಮಾಲೀಕರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ಈ ಕೆಳಗಿನಂತೆ ಕೋರಿರುತ್ತಾರೆ.**

ಆರ್.ಸಿ. ಮಾಲೀಕರು ಈ ವಾಹನವನ್ನು ಶ್ರೀ ಇಬ್ರಾಹಿಂ ಬಿನ್ ಯಾಸೂಬ್, ಮುಗ್ಗುತೋಡಿ ವಾಸಿ, ಕಾಶಿಪಟ್ಟಣ ಅಂಚೆ, ಬೆಳ್ತಂಗಡಿ ತಾ. ಇವರಿಗೆ ಮಾರಾಟಾ ಮಾಡಿರುತ್ತಾರೆಂದು,

ಆದರೆ, ಬೀಟೆ ನಾಟಾ ಅಕ್ರಮವಾಗಿ ದಿ:15–11–2011 ರಂದು ಸಾಗಿಸಿದ ಸಮಯದಲ್ಲಿ ಸದರಿ ವಾಹನವು ಶ್ರೀ ಅಬೂಬುಕ್ಕರ್ ಬಿನ್ ತಂಬಿಇದ್ದಿನಬ್ಬ, ಬಡಗ ಉಳಿಪಾಡಿ ಮಂಗಳೂರು ಇವರ ಹೆಸರಿನಲ್ಲಿ ನೊಂದಣಿಯಾಗಿರುತ್ತದೆ.ಆದ್ದರಿಂದ ಇವರನ್ನೇ ಸದರಿ ವಾಹನದ ಮಾಲೀಕರೆಂದು ಪರಿಗಣಿಸಲಾಗಿದೆ. ಅಲ್ಲದೇ ಆರ್.ಸಿ. ಮಾಲೀಕರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ……………………………………………………………….It is not merely enough if the truck owner says that his truck had*

*been misused without his knowledge or connivance, but in addition he is bound to show that he had taken all reasonable and necessary precautions against such misuse".*

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕರಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಮಹೇಂದ್ರ ಪಿಕ್‌ಅಪ್ ಎಪಿ–05–ವಿ–5360 (ಛಾಸಿಸ್ಸ್ ನಂ: 41J38644, ಇಂಜಿನ್ ನಂ: AB41J29749) ಮತ್ತು ಈ ವಾಹನದಲ್ಲಿದ್ದ, 03 ತುಂಡು ಬೀಟೆ 0.670 ಎಂ3ವು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:24–03–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ,**
**ಸಾಗರ ವಿಭಾಗ, ಸಾಗರ**

**ಪಿ.ಆರ್. ನಂ. 547**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ**

**ಕ್ರ: ಬಿ3: ಅಮೊ:ವಾಹನ:ವಿವ:34/08–09, ದಿನಾಂಕ:24–03–2012**

**ಉಪಸ್ಥಿತರು** : ಮನೋಜ್‌ಕುಮಾರ್ ತ್ರಿಪಾಠಿ, ಭಾ.ಅ.ಸೇ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** : ಶ್ರೀ ಮೋಹನ್ ಶೆಟ್ಟಿ ಬಿನ್ ಮಹಾಬಲ ಶೆಟ್ಟಿ, 45 ವರ್ಷ, ಅರಣ್ಯ ಗುತ್ತಿಗೆದಾರರು, ಸಿದ್ದಾಪುರ, ಕುಂದಾಪುರ ತಾ.

**ಪ್ರಸ್ತಾವನೆ:–**

ದಿ:09–12–2008 ರಂದು ಲಾರಿ ಕೆಎ–20–9393ರಲ್ಲಿ ಹಾಲ್ಮಡ್ಡಿ ಅಕ್ರಮವಾಗಿ ಸಾಗಿಸುತ್ತಿವುದನ್ನು ಹೊಸನಗರ ವಲಯದ ಕಸಬಾ ಶಾಖೆ ವನಪಾಲಕರು ಪತ್ತೆಹಚ್ಚಿ ಬರೆದ ಮಹಜರ್‌ನ ವಿವರ ಈ ಕೆಳಗಿನಂತಿದೆ.

ದಿ:09–12–2008 ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಹೊಸನಗರ ಉಪ ವಿಭಾಗ, ಇವರಿಗೆ ಬಂದ ಖಚಿತ ವರ್ತಮಾನ ಬಂದಿರುತ್ತದೆ. ಇದರಂತೆ ಹೊಸನಗರ ವಲಯದ ಕಸಬಾ ಶಾಖೆ ವನಪಾಲಕರು ಮತ್ತು ಸಿಬ್ಬಂದಿಯವರನ್ನು ಹೊಸನಗರ ವಲಯ ಅರಣ್ಯಾಧಿಕಾರಿ ಕಛೇರಿ ಎದುರಿನಲ್ಲಿರುವ ವೃತ್ತದಲ್ಲಿ ಕಾಯಲು ಆದೇಶಿಸಿದಂತೆ ಈ ಸಿಬ್ಬಂದಿಗಳು ಸದರಿ ಸ್ಥಳದಲ್ಲಿ ಕಾಯುತ್ತಿರುವಾಗ ನಗರ ಕಡೆಯಿಂದ ಬರುತ್ತಿರುವ ಲಾರಿ ಕೆಎ–20–9393ನ್ನು ನಿಲ್ಲಿಸಿ, ಲಾರಿ ಬಾಡಿ ಒಳಗಡೆ ಪರಿಶೀಲಿಸಿ ನೋಡಿದಾಗ ಮರಳು ತುಂಬಿರುವುದು ಕಂಡುಬಂದಿರುತ್ತದೆ. ಮರಳನ್ನು ತೆಗೆದು ನೋಡಿದಾಗ ಕೆಲವು ಪ್ಲಾಸ್ಟಿಕ್ ಚೀಲಗಳು ಇರುವುದು ಕಂಡುಬಂದಿರುತ್ತದೆ. ಆ ಪ್ಲಾಸ್ಟಿಕ್ ಚೀಲಗಳನ್ನು ಬಿಡಿಸಿ ನೋಡಲಾಗಿ ಅದರಲ್ಲಿ ಹಾಲ್ಮಡ್ಡಿ ಇರುತ್ತದೆ. ನಂತರ ಲಾರಿಯಲ್ಲಿ ಇಬ್ಬರು ಆಸಾಮಿಗಳಿದ್ದು, ಅವರ ಹೆಸರನ್ನು ವನಪಾಲಕರು ವಿಚಾರಿಸಲಾಗಿ (1) ಅಬ್ದುಲ್ ಸತ್ತಾರ್ ಬಿನ್ ಹುಸೇನ್, 24 ವರ್ಷ, ಐಸ್‌ಪ್ಲಾಂಟ್ ಹತ್ತಿರ, ಕೋಟಾವಾಸಿ, ಕುಂದಾಪುರ ತಾ. ಉಡುಪಿ ಜಿಲ್ಲೆ. (2) ಸಾಧಿಕ್ ಬಿನ್ ಸೈಯದ್ ಸಾಹೇಬ್, 34 ವರ್ಷ, ಅಳವಳ್ಳಿ ಗ್ರಾಮ,

ಕುಂದಾಪುರ ತಾ. ಉಡುಪಿ ಜಿಲ್ಲೆ ಎಂದು ಹೇಳಿರುತ್ತಾರೆ. ಲಾರಿಯಲ್ಲಿ ಸಿಕ್ಕ ಆರ್.ಸಿ. ಪುಸ್ತಕದಲ್ಲಿ ಹೆಸರು ಅಬ್ದುಲ್ ರವೂಫ್ ಬಿನ್ ಹುಸ್ಸೇನ್‌ಬ್ಯಾರಿ, ಮಾವಿನಕಟ್ಟೆ ಗುಳವಾಡಿ ಅಂಚೆ, ಕುಂದಾಪುರ ತಾ. ಉಡುಪಿ ಜಿಲ್ಲೆ. ಎಂದು ಇರುತ್ತದೆ. ಮತ್ತು ಹಾಲ್ಮಡ್ಡಿಯನ್ನು ಎಲ್ಲಿಂದ ತಂದಿರುವುದೆಂದು ಲಾರಿಯಲ್ಲಿದ ಆಸಾಮಿಗಳನ್ನು ಕೇಳಿದಾಗ ಲಾರಿಯ ಮಾಲೀಕರಾದ ಅಬ್ದುಲ್ ರವೂಫ್ ಬಿನ್ ಹುಸ್ಸೇನ್‌ಬ್ಯಾರಿ, ಗುಳವಾಡಿ ಮಾವಿನಕಟ್ಟೆ ವಾಸಿ, ಕುಂದಾಪುರ ತಾ. ಇವರು ಲಾರಿಯನ್ನು ಕುಂದಾಪುರ ತಾ. ಸಿದ್ದಾಪುರ ವಾಸಿಯಾದ ಮೋಹನ್‌ಶೆಟ್ಟಿ ಮನೆಗೆ ತೆಗೆದುಕೊಂಡು ಹೋಗಿ ಅಲ್ಲಿ ಹಾಲ್ಮಡ್ಡಿಯನ್ನು ತುಂಬಿಕೊಂಡು ಸಾಗರಕ್ಕೆ ಸಾಗಿಸಲು ಹೇಳಿದರು. ನಂತರ ಮೋಹನ್‌ಶೆಟ್ಟಿ ಮನೆಗೆ ಲಾರಿಯನ್ನು ತೆಗೆದುಕೊಂಡು ಹೋಗಿ ಅಲ್ಲಿ ಹಾಲ್ಮಡ್ಡಿ ತುಂಬಿಕೊಂಡು ಮೇಲ್ಬಾಗಕ್ಕೆ ಸ್ವಲ್ಪ ಮರಳನ್ನು ತುಂಬಿಕೊಂಡು ಹೋಗಿ ಎಂದು ಮೋಹನ್‌ಶೆಟ್ಟಿ ಹೇಳಿರುತ್ತಾರೆಂದು ಮತ್ತು ಈ ಹಾಲ್ಮಡ್ಡಿಯನ್ನು ಸಿದ್ದಾಪುರದ ಅಕ್ಕಪಕ್ಕದ ಕಾಡುಗಳಿಂದ ಸಂಗ್ರಹಿಸಿದ್ದೆಂದು ತಿಳಿಸಿರುತ್ತಾರೆ. ನಂತರ ಲಾರಿಯಲ್ಲಿದ 100 ಪ್ಲಾಸ್ಟಿಕ್ ಚೀಲಗಳನ್ನು ಇಳಿಸಿ ತೂಕ ಮಾಡಲಾಗಿ ಪ್ರತಿ ಚೀಲದಲ್ಲಿ 45 ಕೆ.ಜಿ. ಹಾಲ್ಮಡ್ಡಿ ಇದ್ದು, 100 ಚೀಲದಲ್ಲಿ ಒಟ್ಟು 4500 ಕೆ.ಜಿ. ಹಾಲ್ಮಡ್ಡಿ ಇರುತ್ತದೆ. ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿವರದಿಯೊಂದಿಗೆ ಲಾರಿ, ಹಾಲ್ಮಡ್ಡಿ ಮತ್ತು ಆಸಾಮಿಗಳನ್ನು ಇಲಾಖಾಪರ ಜಪ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 33, 62, 71(ಎ), ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವನಪಾಲಕರು ಅ.ಮೊ.ಸಂಖ್ಯೆ:108/08–09ನ್ನು ದಾಖಲಿಸಿರುತ್ತಾರೆ.

ನಂತರ ಲಾರಿಯಲ್ಲಿದ್ದ ಆಸಾಮಿಗಳನ್ನು ಜೆ.ಎಂ.ಎಫ್.ಸಿ. ಹೊಸನಗರಕ್ಕೆ ಒಪ್ಪಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ಈ ಪ್ರಕರಣದಲ್ಲಿ ಜಪ್ತಾದ ಹಾಲ್ಮಡ್ಡಿಯನ್ನು ಬಿಡಿಸಿಕೊಳ್ಳಲು ಶ್ರೀ ಮೋಹನ್ ಶೆಟ್ಟಿ ಬಿನ್ ಮಹಾಬಲಶೆಟ್ಟಿ, 45 ವರ್ಷ, ಅರಣ್ಯ ಗುತ್ತಿಗೆದಾರರು, ಸಿದ್ದಾಪುರ, ಕುಂದಾಪುರ ತಾ. ಉಡುಪಿ ಜಿಲ್ಲೆ. ಇವರು ವಕೀಲರ ಮುಖಾಂತರ ಕ್ಲೇಮು ಅರ್ಜಿಯನ್ನು ದಿ:09–01–2009 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿ ಈ ಕೆಳಗಿನಂತೆ ಕೋರಿರುತ್ತಾರೆ.

1) ಭಾಧ್ಯತೆದಾರರು ಜಪ್ತಾದ ಹಾಲ್ಮಡ್ಡಿಯ ಮಾಲೀಕರೆಂದು.
2) ಈ ಹಾಲ್ಮಡ್ಡಿಯ ದಾಖಲೆಗಳು ಭಾಧ್ಯತೆದಾರರ ಹೆಸರಿನಲ್ಲಿದೆಂದು.
3) ಜಪ್ತಾದ ಹಾಲ್ಮಡ್ಡಿಯನ್ನು ಮುದ್ದೂರು ಪ್ಲಾಂಟೇಷನ್, ಕುಂದಾಪುರ ತಾ. ಉಡುಪಿ ಜಿಲ್ಲೆ ಇವರ ಹತ್ತಿರ ದಿ:07–04–2008 ರಂದು ಖರೀದಿಸಿದ್ದಾರೆಂದು.
4) ಖರೀದಿಸಿದ ಬಗ್ಗೆ ಕ್ಯಾಶ್ ಬಿಲ್ಲನ್ನು ದೃಢೀಕೃತ ನಕಲು ಸಲ್ಲಿಸಿದೆಂದು.
5) ಜಪ್ತಾದ ಹಾಲ್ಮಡ್ಡಿಯನ್ನು ಹಾಗೇ ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಹಾಳಾಗುತ್ತಾದೆಂದು ಮಧ್ಯಂತರ ಅವಧಿಗೆ ಹಾಲ್ಮಡ್ಡಿಯನ್ನು ಬಿಡುಗಡೆಗೆ ಕೋರಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತಾದ 4500 ಕೆ.ಜಿ. ಹಾಲ್ಮಡ್ಡಿಯ ಸೂಕ್ತ ಛಾಯಾಚಿತ್ರವನ್ನು ತೆಗೆದು ಅದರ ಬಗ್ಗೆ ಮಹಜರ್ ಕ್ರಮ ಜರುಗಿಸಿ ವಿಲೇ ಮಾಡಲು ಬಂದ ಹಣ ಠೇವಣಿಯಾಗಿಡಲು ಮಾನ್ಯ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿ, ಹೊಸನಗರ ಇವರು CR No:-359/2008 Dt:09-01-2009 ರಲ್ಲಿ ಆದೇಶಿಸಿರುತ್ತಾರೆ.

ಈ ಆದೇಶದ ಮೇಲೆ ಶ್ರೀ ಮೋಹನ್ ಶೆಟ್ಟಿ ಬಿನ್ ಮಹಾಬಲ ಶೆಟ್ಟಿ, 45 ವರ್ಷ, ಅರಣ್ಯ ಗುತ್ತಿಗೆದಾರರು, ಸಿದ್ದಾಪುರ, ಕುಂದಾಪುರ ತಾ. ಉಡುಪಿ ಜಿಲ್ಲೆ ಇವರು ಡಿ.ಆರ್.ಪಿ. ನಂ:1/2009 ರಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಸದರಿ ಅಪೀಲ್‌ನ ದಿ:16–01–2009ರ ಆದೇಶದಲ್ಲಿ ಹೊಸನಗರ ನ್ಯಾಯಾಲಯದ CR No:-359/2008 Dt:09-01-2009ರ ಆದೇಶವನ್ನು ತಳ್ಳಿಹಾಕಿ ಜಪ್ತಾದ ಹಾಲ್ಮಡ್ಡಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಅಧಿಕಾರ ಅರಣ್ಯ ಇಲಾಖೆ ಅಧಿಕಾರಕ್ಕೆ ಇರುತ್ತದೆಂದು ಆದೇಶ ಹೊರಡಿಸಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತಾದ ಹಾಲ್ಮಡ್ಡಿಯನ್ನು ಹಾಗೇ ಇಟ್ಟರೆ ಹಾಳಾಗಿ ಸರ್ಕಾರಕ್ಕೆ ನಷ್ಟವಾಗಬಹುದೆಂದು ಸದರಿ ಹಾಲ್ಮಡ್ಡಿ 4500 ಕೆ.ಜಿ.ಯನ್ನು ಬಹಿರಂಗ ಹರಾಜಿನಲ್ಲಿ ವಿಲೇ ಮಾಡಲಾಗಿದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಎಂ.ಸಿ.ಸುಣಗಾರ್, ವನಪಾಲಕರು ಹೊಸನಗರ ವಲಯ, ಇವರನ್ನು ದಿ:31–07–2010 ರಂದು ಕರೆಸಿ, ಸತ್ಯಪ್ರತಿಜ್ಞೆ ಬೋಧಿಸಲಾಯಿತು. ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ನಾನು ಕಳೆದ 7 ವರ್ಷಗಳಿಂದ ಹೊಸನಗರ ವಲಯದ ಕಸಬಾ ಶಾಖೆಯಲ್ಲಿ ವನಪಾಲಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:09–12–2008ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಅವರ ಸೂಚನೆಯಂತೆ ನಾನು ನನ್ನ ಸಿಬ್ಬಂದಿಗಳು ಮತ್ತು ಪಂಚರೊಂದಿಗೆ ನಮ್ಮ ಕಛೇರಿಯ ಎದುರಿನ ವೃತ್ತದಲ್ಲಿ ಕಾಯುತ್ತಿದ್ದಾಗ ಮಧ್ಯಾಹ್ನ 1–30ರ ಸಮಯದಲ್ಲಿ ನಗರದಿಂದ ಹೊಸನಗರದ ಕಡೆಯಿಂದ ಒಂದು ಲಾರಿ ಬರುತ್ತಿದ್ದು, ಅದರ ನೊಂದಣಿ ಸಂ:ಕೆಎ–20 9393 ಆಗಿದ್ದು, ಅದನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಅದರಲ್ಲಿ ಇಬ್ಬರು ಆಸಾಮಿಗಳಿದ್ದು, ಅವರಲ್ಲಿ ಒಬ್ಬ ಅಬ್ದುಲ್ ಸತ್ತಾರ್ ಮತ್ತೊಬ್ಬ ಸಾಧಿಕ್ ಎಂದು ತಿಳಿಸಿದರು. ನಂತರ ಲಾರಿಯನ್ನು ಪರಿಶೀಲಿಸಲಾಗಿ ಅದರಲ್ಲಿ ಮರಳು ಇದ್ದು, ಅದನ್ನು ತೆಗೆದು ನೋಡಲಾಗಿ ಅದರೊಳಗೆ ಪ್ಲಾಸ್ಟಿಕ್ ಚೀಲಗಳಿದ್ದು, ಸದರಿ ಚೀಲಗಳನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಹಾಲ್ಮಡ್ಡಿ ಇತ್ತು. ಒಟ್ಟು 4500 ಕೆ.ಜಿ. ಹಾಲ್ಮಡ್ಡಿ ಇದ್ದು, ಹಾಲ್ಮಡ್ಡಿ ಮತ್ತು ಲಾರಿಗೆ ಕ್ರಮ ಸಂಖ್ಯೆ ಕೊಟ್ಟು

ಪಂಚರ ಸಮಕ್ಷಮ ಅಮಾನತ್ತು ಪಡಿಸಿಕೊಂಡು ಮಹಜರ್ ಬರೆಯಲಾಯಿತು. ಆರೋಪಿಗಳನ್ನು ಸಹ ಬಂಧಿಸಲಾಯಿತು. ಆಗ ಮಾಡಿದ ಮಹಜರ್‌ನ್ನು ನೋಡುತ್ತಿದ್ದು, ಅದನ್ನು ನಿಪಿ–1 ಎಂದು, ಅದರಲ್ಲಿನ ನನ್ನ ಸಹಿಯನ್ನು 1ಎ ಎಂದು, ಆ ಬಗ್ಗೆ ಪ್ರಥಮ ವರ್ತಮಾನ ವರದಿಯನ್ನು ನಾನು ದಾಖಲಿಸಿದ್ದು, ನಿಪಿ–2 ಎಂದು, ಅದರಲ್ಲಿನ ನನ್ನ ಸಹಿಯನ್ನು 2ಎ ಎಂದು ಗುರುತಿಸಿದೆ. ಜಪ್ತುಪಡಿಸಿದ ಮಾಲಿನ ಬಗ್ಗೆ ಜಪ್ತು ವರದಿ ತಯಾರಿಸಿದ್ದು, ಅದನ್ನು ನಿಪಿ–3 ಎಂದು, ಅದರಲ್ಲಿನ ನನ್ನ ಸಹಿಯನ್ನು 3ಎ ಎಂದು ಗುರುತಿಸಿದೆ. ನಂತರ ಆರೋಪಿಗಳನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಲಾಯಿತು. ನಂತರ ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶದ ಮೇರೆಗೆ ವಾಹವನ್ನು ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರಕ್ಕೆ ಸಾಗಿಸಲಾಯಿತು. ಹಾಲ್ಮಡ್ಡಿಯನ್ನು ಇಲಾಖಾ ಗೋಡಾನ್‌ನಲ್ಲಿ ಇರಿಸಲಾಯಿತು. ಮುಂದಿನ ತನಿಖೆಯನ್ನು ವಲಯ ಅರಣ್ಯಾಧಿಕಾರಿಗಳಿಗೆ ವಹಿಸಿರುತ್ತೇನೆ. ಸದರಿ ವಾಹನವನ್ನು ಅಕ್ರಮವಾಗಿ ಹಾಲ್ಮಡ್ಡಿ ಸಾಗಿಸಲು ಬಳಸಿದ್ದರಿಂದ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ.

ಪಾಟಿಸವಾಲು ಮಾಡಲು ಡಿಫೆನ್ಸ್ ಕಡೆಯವರಿಗೆ ದಿ:31–07–2010 ರಂದು ದಿನಾಂಕ ನಿಗಧಿಪಡಿಸಿದ್ದು, ಆ ದಿನ ಡಿಫೆನ್ಸ ಕಡೆ ವಕೀಲರು ಪಾಟಿಸವಾಲು ಮಾಡಿರುವುದಿಲ್ಲ. ನಂತರ CRPC-311 ರ ಪ್ರಕಾರ ಡಿಫೆನ್ಸ್ ಕಡೆ ವಕೀಲರು ದಿ:29–10–2011 ರಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಪ್ರಾಸಿಕ್ಯೂಷನ್ ಸಾಕ್ಷಿಗೆ ಪಾಟಿಸವಾಲು ಮಾಡಲು ಕೋರಿದ್ದಾರೆ. ಇವರ ಕೋರಿಕೆ ಮೇಲೆ ದಿ:19–11–2011 ರಂದು ದಿನಾಂಕ ನೀಡಲಾಯಿತು. ಸದರಿ ದಿನಾಂಕದಂದು ಡಿಫೆನ್ಸ್ ಕಡೆಯವರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಇದರಿಂದ ಪಾಟಿಸವಾಲು ಮಾಡಲು ಡಿಫೆನ್ಸ್ ಕಡೆಯವರಿಗೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಯಿತು. ಹಾಗೂ ಮುಂದಿನ ಕ್ರಮ ತೆಗೆದುಕೊಳ್ಳಲಾಯಿತು.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:04–09–2010, 25–10–2010, 27–11–2010, 19–02–2011, 26–02–2011 ರಂದು ಒಟ್ಟು ಐದು ಬಾರಿ ದಿನಾಂಕ ನೀಡಲಾಯಿತು. ಮತ್ತು ವಾದ ಮಂಡಿಸಲು ದಿ:05–03–2011, 16–07–2011, 23–07–2011, 06–08–2011, 20–08–2011, 27–08–2011, 17–09–2011, 01–10–2011, 29–10–2011, 31–12–2011, 07–01–2012 ಮತ್ತು 03–03–2012 ರಂದು ಒಟ್ಟು ಹನ್ನೆರಡು ಬಾರಿ ದಿನಾಂಕ ನೀಡಿ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗ ಹಾಜರಾಗಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–03–2012ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.**

1. ಅರ್ಜಿದಾರರು ಜಪ್ತಾದ ಹಾಲ್ಮಡ್ಡಿಯನ್ನು ಅಕ್ರಮವಾಗಿ ದಾಸ್ತಾನು ಮಾಡಿ ಸಾಗಿಸಿರುತ್ತಾರೆಯೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಅರ್ಜಿದಾರರು ಜಪ್ತಾದ ಹಾಲ್ಮಡ್ಡಿಯನ್ನು ಕಾನೂನಬದ್ದವಾಗಿ ಖರೀದಿಸಿರುತ್ತಾರೆಯೇ? ಈ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆಯೇ?
3. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಇಲ್ಲಾ ಎಂತಲೂ

**<u>ಅಂಶ–1:</u>**

ದಿ:09–12–2008 ರಂದು ಹೊಸನಗರ ವಲಯದ ಕಸಬಾ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಹೊಸನಗರ ತಾ॥ ಹೊಸನಗರ ವಲಯ ಕಛೇರಿ ಮುಂಭಾಗದಲ್ಲಿ ಮಧ್ಯಾಹ್ನ ಕಾಯುತ್ತಿರುವಾಗ ಸುಮಾರು 1–30ರ ಸಮಯದಲ್ಲಿ ಲಾರಿ ಕೆಎ–20–9393ರಲ್ಲಿ ಹಾಲ್ಮಡ್ಡಿ 4500 ಕೆ.ಜಿ.ಯನ್ನು ಅಕ್ರಮವಾಗಿ ಸಾಗಿಸುತ್ತಿರುವ ಬಗ್ಗೆ ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರಿಗೆ ಸಲ್ಲಿಸಿರುತ್ತಾರೆ. ನಂತರ ವಲಯ ಅರಣ್ಯಾದಿಕಾರಿ, ಈ ದಾಖಲೆಗಳೊಂದಿಗೆ ವಾಹನ ಮತ್ತು ಹಾಲ್ಮಡ್ಡಿ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಿರುವುದು ಸಾಭೀತಾಗಿದೆ. ಈ ರೀತಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಅರ್ಜಿದಾರರು ಹಾಲ್ಮಡ್ಡಿಯನ್ನು ಮೂದೂರು ಪ್ಲಾಂಟೇಷನ್ ಕುಂದಾಪುರ ತಾ. ಉಡುಪಿ ಜಿ. ಇವರಿಂದ ದಿ:07–01–2008 ರಂದು ಖರೀದಿಸಿದೆಂದು ಅರ್ಜಿಯಲ್ಲಿ ತಿಳಿಸಿರುತ್ತಾರೆ. ಆದರೆ, ಈ ಬಗ್ಗೆ ಸಂಬಂಧಪಟ್ಟ ನೊಂದಾಯಿತ ಸಂಸ್ಥೆಯಿಂದ ಖರೀದಿಸಿದ ಬಗ್ಗೆ ಸೂಕ್ತ ದೃಢೀಕೃತ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ವಿಚಾರಣಾ ಕಾಲದಲ್ಲಿ ಸಲ್ಲಿಸಿರುವುದಿಲ್ಲ. ಹಾಗೂ ಈ ಹಾಲ್ಮಡ್ಡಿಯನ್ನು ಕಾನೂನಬದ್ದವಾಗಿ ಖರೀದಿಸಿದ ಬಗ್ಗೆ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ. ಇದರಿಂದ ಈ ಪ್ರಕರಣದಲ್ಲಿ ಜಪ್ತಾದ ಹಾಲುಮುಡ್ಡಿಯು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 80ರ ಪ್ರಕಾರ ಸರ್ಕಾರದ ಸ್ವತ್ತು ಎಂದು ಪರಿಗಣಿಸಲಾಯಿತು.

**ಅಂಶ–3:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನಿನ ಅಡಿ ಜಪ್ತು ಮಾಡಿದ ಹಾಲ್ಮಡ್ಡಿ 4500 ಕೆ.ಜಿ.ಯನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:24–03–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ.

ಪಿ.ಆರ್. ನಂ. 556

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ

**ಕ್ರ: ಬಿ3: ಅಮೊ:ವಾಹನ:ವಿವ:34/08–09, ದಿನಾಂಕ:24–03–2012**

**ಉಪಸ್ಥಿತರು** : ಮನೋಜ್‌ಕುಮಾರ್ ತ್ರಿಪಾಠಿ, ಭಾ.ಅ.ಸೇ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** : ಶ್ರೀ ಅಬ್ದುಲ್‌ರವೂಫ್ ಬಿನ್ ಹಸನ್‌ಬ್ಯಾರಿ, ಮಾವಿನಕಟ್ಟೆ ಗುಲ್ವಾಡಿ ಅಂಚೆ, ಕುಂದಾಪುರ ತಾ. ಉಡುಪಿ ಜಿಲ್ಲೆ.

**ಪ್ರಸ್ತಾವನೆ:–**

ದಿ: 09–12–2008 ರಂದು ಲಾರಿ ಕೆಎ–20–9393ರಲ್ಲಿ ಹಾಲ್ಮಡ್ಡಿ ಅಕ್ರಮವಾಗಿ ಸಾಗಿಸುತ್ತಿವುದನ್ನು ಹೊಸನಗರ ವಲಯದ ಕಸಬಾ ಶಾಖೆ ವನಪಾಲಕರು ಪತ್ತೆಹಚ್ಚಿದ ಮಹಜರ್‌ನ ವಿವರ ಈ ಕೆಳಗಿನಂತಿದೆ.

ದಿ: 09–12–2008 ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಹೊಸನಗರ ಉಪ ವಿಭಾಗ, ಇವರಿಗೆ ಖಚಿತ ವರ್ತಮಾನ ಬಂದಿರುತ್ತದೆ. ಇದರಂತೆ ಹೊಸನಗರ ವಲಯದ ಕಸಬಾ ಶಾಖೆ ವನಪಾಲಕರು ಮತ್ತು ಸಿಬ್ಬಂದಿಯವರನ್ನು ಹೊಸನಗರ ವಲಯ ಅರಣ್ಯಾಧಿಕಾರಿ ಕಛೇರಿ ಎದುರಿನಲ್ಲಿರುವ ವೃತ್ತದಲ್ಲಿ ಕಾಯಲು ಆದೇಶಿಸಿದಂತೆ ಈ ಸಿಬ್ಬಂದಿಗಳು ಸದರಿ ಸ್ಥಳದಲ್ಲಿ ಕಾಯುತ್ತಿರುವಾಗ ನಗರ ಕಡೆಯಿಂದ ಬರುತ್ತಿರುವ ಲಾರಿ ಕೆಎ–20 9393ನ್ನು ನಿಲ್ಲಿಸಿ, ಲಾರಿ ಬಾಡಿ ಒಳಗಡೆ ಪರಿಶೀಲಿಸಿ ನೋಡಿದಾಗ ಮರಳು ತುಂಬಿರುವುದು ಕಂಡುಬಂದಿರುತ್ತದೆ. ಮರಳನ್ನು ತೆಗೆದು ನೋಡಿದಾಗ ಕೆಲವು ಪ್ಲಾಸ್ಟಿಕ್ ಚೀಲಗಳು ಇರುವುದು ಕಂಡುಬಂದಿರುತ್ತದೆ. ಆ ಪ್ಲಾಸ್ಟಿಕ್ ಚೀಲಗಳನ್ನು ಬಿಡಿಸಿ ನೋಡಲಾಗಿ ಅದರಲ್ಲಿ ಹಾಲ್ಮಡ್ಡಿ ಇರುತ್ತದೆ. ನಂತರ ಲಾರಿಯಲ್ಲಿ ಇಬ್ಬರು ಆಸಾಮಿಗಳಿದ್ದು, ಅವರ ಹೆಸರನ್ನು ವನಪಾಲಕರು ವಿಚಾರಿಸಲಾಗಿ (1)ಅಬ್ದುಲ್ ಸತ್ತಾರ್ ಬಿನ್ ಹುಸೇನ್, 24 ವರ್ಷ, ಐಸ್‌ಪ್ಲಾಂಟ್ ಹತ್ತಿರ, ಕೋಟಾವಾಸಿ, ಕುಂದಾಪುರ ತಾ. ಉಡುಪಿ ಜಿಲ್ಲೆ. (2)ಸಾಧಿಕ್ ಬಿನ್ ಸೈಯದ್ ಸಾಹೇಬ್, 34 ವರ್ಷ, ಅಳವಳ್ಳಿ ಗ್ರಾಮ, ಕುಂದಾಪುರ ತಾ. ಉಡುಪಿ ಜಿಲ್ಲೆ ಎಂದು ಹೇಳಿರುತ್ತಾರೆ. ಲಾರಿಯಲ್ಲಿ ಸಿಕ್ಕ ಆರ್.ಸಿ. ಪುಸ್ತಕದಲ್ಲಿ ಹೆಸರು ಅಬ್ದುಲ್ ರವೂಫ್ ಬಿನ್ ಹುಸ್ಸೇನ್‌ಬ್ಯಾರಿ,

ಮಾವಿನಕಟ್ಟೆ ಗುಳವಾಡಿ ಅಂಚೆ, ಕುಂದಾಪುರ ತಾ. ಉಡುಪಿ ಜಿಲ್ಲೆ. ಎಂದು ಇರುತ್ತದೆ. ಮತ್ತು ಹಾಲ್ಮಡ್ಡಿಯನ್ನು ಎಲ್ಲಿಂದ ತಂದಿರುವುದೆಂದು ಲಾರಿಯಲ್ಲಿದ ಆಸಾಮಿಗಳನ್ನು ಕೇಳಿದಾಗ ಲಾರಿಯ ಮಾಲೀಕರಾದ ಅಬ್ದುಲ್ ರವೂಫ್ ಬಿನ್ ಹುಸ್ಸೇನ್‌ಬ್ಯಾರಿ, ಗುಳವಾಡಿ ಮಾವಿನಕಟ್ಟೆ ವಾಸಿ, ಕುಂದಾಮರ ತಾ. ಇವರು ಲಾರಿಯನ್ನು ಕುಂದಾಪುರ ತಾ. ಸಿದ್ದಾಪುರ ವಾಸಿಯಾದ ಮೋಹನ್‌ಶೆಟ್ಟಿ ಮನೆಗೆ ತೆಗೆದುಕೊಂಡು ಹೋಗಿ ಅಲ್ಲಿ ಹಾಲ್ಮಡ್ಡಿಯನ್ನು ತುಂಬಿಕೊಂಡು ಸಾಗರಕ್ಕೆ ಸಾಗಿಸಲು ಹೇಳಿದರು. ನಂತರ ಮೋಹನ್‌ಶೆಟ್ಟಿ ಮನೆಗೆ ಲಾರಿಯನ್ನು ತೆಗೆದುಕೊಂಡು ಹೋಗಿ ಅಲ್ಲಿ ಹಾಲ್ಮಡ್ಡಿ ತುಂಬಿಕೊಂಡು ಮೇಲ್ಭಾಗಕ್ಕೆ ಸ್ವಲ್ಪ ಮರಳನ್ನು ತುಂಬಿಕೊಂಡು ಹೋಗಿ ಎಂದು ಮೋಹನ್‌ಶೆಟ್ಟಿ ಹೇಳಿರುತ್ತಾರೆಂದು ಮತ್ತು ಈ ಹಾಲ್ಮಡ್ಡಿಯನ್ನು ಸಿದ್ದಾಪುರದ ಅಕ್ಕಪಕ್ಕದ ಕಾಡುಗಳಿಂದ ಸಂಗ್ರಹಿಸಿದ್ದೆಂದು ತಿಳಿಸಿರುತ್ತಾರೆ. ನಂತರ ಲಾರಿಯಲ್ಲಿದ 100 ಪ್ಲಾಸ್ಟಿಕ್ ಚೀಲಗಳನ್ನು ಇಳಿಸಿ ತೂಕ ಮಾಡಲಾಗಿ ಪ್ರತಿ ಚೀಲದಲ್ಲಿ 45 ಕೆ.ಜಿ. ಹಾಲ್ಮಡ್ಡಿ ಇದ್ದು, 100 ಚೀಲದಲ್ಲಿ ಒಟ್ಟು 4500 ಕೆ.ಜಿ. ಹಾಲ್ಮಡ್ಡಿ ಇರುತ್ತದೆ. ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿವರದಿಯೊಂದಿಗೆ ಲಾರಿ, ಹಾಲ್ಮಡ್ಡಿ ಮತ್ತು ಆಸಾಮಿಗಳನ್ನು ಇಲಾಖಾಪರ ಜಪ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 33, 62, 71(ಎ), ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವನಪಾಲಕರು ಅ.ಮೊ.ಸಂಖ್ಯೆ:108/08–09ನ್ನು ದಾಖಲಿಸಿರುತ್ತಾರೆ.

ನಂತರ ಲಾರಿಯಲ್ಲಿದ್ದ ಆಸಾಮಿಗಳನ್ನು ಜೆ.ಎಂ.ಎಫ್.ಸಿ. ಹೊಸನಗರಕ್ಕೆ ಒಪ್ಪಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–34/08–09 ದಿ: 15–12–2008 ರಂದು ಸಾರಿಗೆ ಅಧಿಕಾರಿ, ಉಡುಪಿ ಇವರಿಗೆ ಪತ್ರ ಬರೆದು ಕೋರಲಾಯಿತು. ಸಾರಿಗೆ ಅಧಿಕಾರಿ ಉಡುಪಿ ಇವರು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ದಿ:17–01–2009 ರಂದು ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಶ್ರೀ ಅಬ್ದುಲ್ ರವೂಫ್ ಬಿನ್ ಹಸನ್‌ಬ್ಯಾರಿ, ಮಾವಿನಕಟ್ಟೆ ಗುಲ್ವಾಡಿ ಅಂಚೆ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ ಎಂದು ನಮೂದಾಗಿರುತ್ತದೆ. ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)ರ ಪ್ರಕಾರ ಕಾರಣ ಕೇಳಿ ನೋಟಿಸ್‌ನ್ನು ದಿ:20–01–2009 ರಂದು ನೊಂದಣಿ ಅಂಚೆ ಮೂಲಕ ಜಾರಿಮಾಡಿದೆ ಸ್ವೀಕೃತಿ ಈ ನ್ಯಾಯಾಲಯಕ್ಕೆ ತಲುಪಿರುತ್ತದೆ.

ಈ ಪ್ರಕರಣದಲ್ಲಿ ಜಪ್ತಾದ ಲಾರಿಯನ್ನು ಬಿಡಿಸಿಕೊಳ್ಳಲು ಶ್ರೀ ಅಬ್ದುಲ್ ರವೂಫ್ ಬಿನ್ ಹಸನ್‌ಬ್ಯಾರಿ, ಮಾವಿನಕಟ್ಟೆ ಗುಲ್ವಾಡಿ ಅಂಚೆ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ ಇವರ ವಕೀಲರ ಮುಖಾಂತರ ಕ್ಲೇಮು ಅರ್ಜಿಯನ್ನು ದಿ:09–01–2009ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇವರ ಅರ್ಜಿಯನ್ನು ದಿ:19–09–2009ರಂದು ತಿರಸ್ಕರಿಸಿ ಈ ನ್ಯಾಯಾಲಯದಿಂದ ಆದೇಶವಾಗಿದೆ. ಈ ಆದೇಶದ ಮೇಲೆ ಆರ್.ಸಿ. ಮಾಲೀಕರು ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಶೀಘ್ರ ವಿಲೇವಾರಿ ನ್ಯಾಯಾಲಯ–II ಶಿವಮೊಗ್ಗದಲ್ಲಿ ಕ್ರಿ.ಮಿ. ಅಫೀಲ್ ನಂ:20/2009 ನಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಸದರಿ ಅಫೀಲ್‌ನ ದಿ:19–12–2009 ರಂದು ಶೀಘ್ರ ವಿಲೇವಾರಿ ನ್ಯಾಯಾಲಯವು 4 ಷರತ್ತುಗಳನ್ನು ವಿಧಿಸಿ ₹ 8.00 ಲಕ್ಷಗಳಿಗೆ ಬ್ಯಾಂಕ್ ಗ್ಯಾರಂಟಿ ಮತ್ತು ಅಷ್ಟೇ ಮೊತ್ತಕ್ಕೆ ನಷ್ಟ ಭರ್ತಿ ಬಾಂಡ್‌ನ್ನು ಸಲ್ಲಿಸಿ, ವಾಹನ ಮಧ್ಯಂತರ ಅವಧಿಗೆ ಬಿಡಲು ಆದೇಶ ಮಾಡಿರುತ್ತದೆ. ಈ ಅಫೀಲನ್ ಮೇಲೆ ಆರ್.ಸಿ. ಮಾಲೀಕರು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಕರ್ನಾಟಕ ಇಲ್ಲಿ ಕ್ರಿಮಿನಲ್ ಮಿಸಲಿನಿಯಸ್ ನಂ:3275/2010ರಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಈ ಕ್ರಿಮಿನಲ್ ಮಿಸಲಿನಿಯಸ್ ನಂ:3275/2010 ದಿ:09–08–2010ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಜಿಲ್ಲಾ ನ್ಯಾಯಾಲಯದ ಆದೇಶದಲ್ಲಿ ಸ್ವಲ್ಪ ಬದಲಾಯಿಸಿ ಆರ್.ಸಿ. ಮಾಲೀಕರಿಗೆ ₹ 3.10 ಲಕ್ಷಕ್ಕೆ ಬ್ಯಾಂಕ್ ಗ್ಯಾರಂಟಿ ಸಲ್ಲಿಸಿ ವಾಹನ ಮಧ್ಯಂತರ ಅವಧಿಗೆ ಪಡೆಯಲು ಆದೇಶವಾಗಿರುತ್ತದೆ. ಆದರೆ, ಆರ್.ಸಿ. ಮಾಲೀಕರು ಇಲ್ಲಿಯವರೆಗೂ ನ್ಯಾಯಾಲಯದ ಆದೇಶವನ್ನು ಪಾಲಿಸಿರುವುದಿಲ್ಲ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಎಂ.ಸಿ.ಸುಣಗಾರ್, ವನಪಾಲಕರು ಹೊಸನಗರ ವಲಯ, ಇವರನ್ನು ದಿ:31–07–2010 ರಂದು ಕರೆಸಿ, ಸತ್ಯಪ್ರತಿಜ್ಞೆ ಬೋಧಿಸಲಾಯಿತು. ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ನಾನು ಕಳೆದ 7 ವರ್ಷಗಳಿಂದ ಹೊಸನಗರ ವಲಯದ ಕಸಬಾ ಶಾಖೆಯಲ್ಲಿ ವನಪಾಲಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:09–12–2008ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಅವರ ಸೂಚನೆಯಂತೆ ನಾನು ನನ್ನ ಸಿಬ್ಬಂದಿಗಳು ಮತ್ತು ಪಂಚರೊಂದಿಗೆ ನಮ್ಮ ಕಛೇರಿಯ ಎದುರಿನ ವೃತ್ತದಲ್ಲಿ ಕಾಯುತ್ತಿದ್ದಾಗ ಮಧ್ಯಾಹ್ನ 1–30ರ ಸಮಯದಲ್ಲಿ ನಗರ ಕಡೆಯಿಂದ ಒಂದು ಲಾರಿ ಬರುತ್ತಿದ್ದು, ಅದರ ನೊಂದಣಿ ಸಂ:ಕೆಎ–20 9393 ಆಗಿದ್ದು, ಅದನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಅದರಲ್ಲಿ ಇಬ್ಬರು ಆಸಾಮಿಗಳಿದ್ದು, ಅವರಲ್ಲಿ ಒಬ್ಬ ಅಬ್ದುಲ್ ಸತ್ತಾರ್ ಮತ್ತೊಬ್ಬ ಸಾಧಿಕ್ ಎಂದು ತಿಳಿಸಿದರು. ನಂತರ ಲಾರಿಯನ್ನು ಪರಿಶೀಲಿಸಲಾಗಿ ಅದರಲ್ಲಿ ಮರಳು ಇದ್ದು, ಅದನ್ನು ತೆಗೆದು ನೋಡಲಾಗಿ ಅದರೊಳಗೆ ಪ್ಲಾಸ್ಟಿಕ್ ಚೀಲಗಳಿದ್ದು, ಸದರಿ ಚೀಲಗಳನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಹಾಲ್ಮಡ್ಡಿ ಇತ್ತು. ಒಟ್ಟು 4500 ಕೆ.ಜಿ. ಹಾಲ್ಮಡ್ಡಿ ಇದ್ದು, ಹಾಲ್ಮಡ್ಡಿ ಮತ್ತು ಲಾರಿಗೆ ಕ್ರಮ ಸಂಖ್ಯೆ ಕೊಟ್ಟು ಪಂಚರ ಸಮಕ್ಷಮ ಅಮಾನತ್ತು ಪಡಿಸಿಕೊಂಡು ಮಹಜರ್ ಬರೆಯಲಾಯಿತು. ಆರೋಪಿಗಳನ್ನು ಸಹ ಬಂಧಿಸಲಾಯಿತು. ಆಗ ಮಾಡಿದ ಮಹಜರ್‌ನ್ನು ನೋಡುತ್ತಿದ್ದು, ಅದನ್ನು ನಿಪಿ–1 ಎಂದು, ಅದರಲ್ಲಿನ ನನ್ನ ಸಹಿಯನ್ನು 1ಎ ಎಂದು, ಆ ಬಗ್ಗೆ ಪ್ರಥಮ ವರ್ತಮಾನ ವರದಿಯನ್ನು ನಾನು ದಾಖಲಿಸಿದ್ದು, ನಿಪಿ–2 ಎಂದು, ಅದರಲ್ಲಿನ ನನ್ನ ಸಹಿಯನ್ನು 2ಎ ಎಂದು ಗುರುತಿಸಿದೆ. ಜಪ್ತುಪಡಿಸಿದ ಮಾಲಿನ ಬಗ್ಗೆ ಜಪ್ತು ವರದಿ ತಯಾರಿಸಿದ್ದು, ಅದನ್ನು ನಿಪಿ–3 ಎಂದು, ಅದರಲ್ಲಿನ ನನ್ನ ಸಹಿಯನ್ನು 3ಎ ಎಂದು ಗುರುತಿಸಿದೆ. ನಂತರ ಆರೋಪಿಗಳನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಲಾಯಿತು.

ನಂತರ ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶದ ಮೇರೆಗೆ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರಕ್ಕೆ ಸಾಗಿಸಲಾಯಿತು. ಹಾಲ್ಮಡ್ಡಿಯನ್ನು ಇಲಾಖಾ ಗೋಡಾನ್‌ನಲ್ಲಿ ಇರಿಸಲಾಯಿತು. ಮುಂದಿನ ತನಿಖೆಯನ್ನು ವಲಯ ಅರಣ್ಯಾಧಿಕಾರಿಗಳಿಗೆ ವಹಿಸಿರುತ್ತೇನೆ. ಸದರಿ ವಾಹನವನ್ನು ಅಕ್ರಮವಾಗಿ ಹಾಲ್ಮಡ್ಡಿ ಸಾಗಿಸಲು ಬಳಸಿದ್ದರಿಂದ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ.

ಪಾಟಿಸವಾಲು ಮಾಡಲು ಡಿಫೆನ್ಸ್ ಕಡೆಯವರಿಗೆ ದಿ:31-07-2010 ರಂದು ದಿನಾಂಕ ನಿಗಧಿಪಡಿಸಲಾಗಿದ್ದು, ಆ ದಿನದಂದು ವಕೀಲರು ಗೈರು ಹಾಜರಾಗಿರುತ್ತಾರೆ. ಪಾಟಿಸವಾಲು ಇಲ್ಲವೆಂದು ಪರಿಗಣಿಸಿ ಮುಂದಿನ ಕ್ರಮಕೈಗೊಳ್ಳಲಾಯಿತು.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:04-09-2010, 25-10-2010, 27-11-2010, 19-02-2011, 26-02-2011 ರಂದು ಒಟ್ಟು ಐದು ಬಾರಿ ದಿನಾಂಕ ನೀಡಲಾಯಿತು. ಮತ್ತು ವಾದ ಮಂಡಿಸಲು ದಿ:05-03-2011, 16-07-2011, 23-07-2011, 06-08-2011, 20-08-2011, 27-08-2011, 17-09-2011, 01-10-2011, 29-10-2011 ರಂದು ಒಟ್ಟು ಒಂಭತ್ತು ಬಾರಿ ದಿನಾಂಕ ನೀಡಿ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗ ಹಾಜರಾಗಿರುವುದಿಲ್ಲ. ಡಿಫೆನ್ಸ್ ಕಡೆಯವರಿಗೆ ಈ ಪ್ರಕರಣದಲ್ಲಿ ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಆಸಕ್ತಿ ಇಲ್ಲವೆಂದು ತೀರ್ಮಾನಿಸಿ ಮುಂದಿನ ಕ್ರಮಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:29-10-2011ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.**

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಲಾರಿ ಕೆಎ-20-9393 ರಲ್ಲಿ ಅರಣ್ಯ ಉತ್ಪನ್ನವಾದ 4500 ಕೆ.ಜಿ. ಹಾಲ್ಮಡ್ಡಿಯನ್ನು ದಿ: 09-12-2008ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಲಾರಿಯಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಹಾಲ್ಮಡ್ಡಿಯನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ-1:**

ದಿ: 09-12-2008 ರಂದು ಹೊಸನಗರ ವಲಯದ ಕಸಬಾ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಹೊಸನಗರ ತಾ॥ ಹೊಸನಗರ ವಲಯ ಕಛೇರಿ ಮುಂಭಾಗದಲ್ಲಿ ಮಧ್ಯಾಹ್ನ ಕಾಯುತ್ತಿರುವಾಗ ಸುಮಾರು 1-30ರ ಸಮಯದಲ್ಲಿ ಲಾರಿ ಕೆಎ-20-9393ರಲ್ಲಿ ಹಾಲ್ಮಡ್ಡಿ 4500 ಕೆ.ಜಿ.ಯನ್ನು ಅಕ್ರಮವಾಗಿ ಸಾಗಿಸುತ್ತಿರುವ ಬಗ್ಗೆ ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರಿಗೆ ಸಲ್ಲಿಸಿರುತ್ತಾರೆ. ನಂತರ ವಲಯ ಅರಣ್ಯಾದಿಕಾರಿ, ಈ ದಾಖಲೆಗಳೊಂದಿಗೆ ವಾಹನ ಮತ್ತು ಹಾಲ್ಮಡ್ಡಿ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಅಬ್ದುಲ್ ರವೂಫ್ ಬಿನ್ ಹಸನ್‌ಬ್ಯಾರಿ, ಮಾವಿನಕಟ್ಟೆ ಗುಲ್ವಾಡಿ ಅಂಚೆ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ ಇವರು ದಿ:09–01–2009ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:20–01–2009 ರಂದು ಅಂಚೆ ಮೂಲಕ ಜಾರಿ ಮಾಡಿದೆ. ಹಾಗೂ ಸ್ವೀಕೃತಿ ಈ ನ್ಯಾಯಾಲಯಕ್ಕೆ ಬಂದಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು ಐದು ಬಾರಿ ದಿನಾಂಕಗಳನ್ನು ನೀಡಲಾಗಿದ್ದು, ಮತ್ತು ಡಿಫೆನ್ಸ್ ವಾದ ಮಂಡಿಸಲು ಒಂಭತ್ತು ಬಾರಿ ದಿನಾಂಕವನ್ನು ನೀಡಲಾಗಿತ್ತು. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:09–12–2008 ರಂದು ಲಾರಿ ಕೆಎ–20–9393ಯಲ್ಲಿ 100 ಪ್ಲಾಸ್ಟಿಕ್ ಚೀಲದಲ್ಲಿ 4500 ಕೆ.ಜಿ. ಹಾಲ್ಮಡ್ಡಿ ಅಕ್ರಮವಾಗಿ ಸಾಗಿಸುತ್ತಿದ್ದಾಗ, ಹೊಸನಗರ ವಲಯದ ಕಸಬಾ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ವಲಯ ಅರಣ್ಯಾಧಿಕಾರಿ, ಹೊಸನಗರ ಇವರಿಗೆ ಸಲ್ಲಿಸಿದ್ದು, ನಂತರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಈ ದಾಖಲೆಗಳೊಂದಿಗೆ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ: 09–01–2009ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡ ಬಗ್ಗೆ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ಲಾರಿ ಕೆಎ–20–9393ಯನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ: 24–03–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ**
**ಸಾಗರ ವಿಭಾಗ, ಸಾಗರ.**

**ಪಿ.ಆರ್. ನಂ. 558**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ

**ಕ್ರ: ಬಿ3: ಅಮೊ:ವಾಹನ:ವಿವ:43/08-09, ದಿನಾಂಕ:24-03-2012**

**ಉಪಸ್ಥಿತರು** : ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ. (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** : ಶ್ರೀ ಎಂ.ವಿ. ಪ್ರೇಮ್‌ಕುಮಾರ್ ಬಿನ್ ವೀರಪ್ಪ, ಮಾರವಳ್ಳಿ ಅಂಚೆ, ಶಿಕಾರಿಪುರ ತಾಲ್ಲೂಕು.
(ಶ್ರೀ ಜಾಹೀದ್ ಅಹಮದ್, ವಕೀಲರು, ಸಾಗರ)

**ಪ್ರಸ್ತಾವನೆ:-**

ದಿ:23-02-2009 ರಂದು ಬೊಲೆರೊ ಪಿಕ್‌ಅಪ್‌ನಲ್ಲಿ ಬೀಟೆ ನಾಟಾ ಮತ್ತು ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸುತ್ತಿರುವುದನ್ನು ಆನಂದಪುರಂ ವಲಯದ ವಲಯ ಅರಣ್ಯಾಧಿಕಾರಿ ಪತ್ತೆಹಚ್ಚಿ ಬರೆದ ಮಹಜರ್ ವಿವರ ಈ ಕೆಳಗಿನಂತಿದೆ.

ದಿ:23-02-2009ರಂದು ಆನಂದಪುರಂ ವಲಯದ ವಲಯ ಅರಣ್ಯಾಧಿಕಾರಿಗೆ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ವಲಯ ಅರಣ್ಯಾಧಿಕಾರಿ, ಮತ್ತು ಸಿಬ್ಬಂದಿಯವರು ಶಿವಮೊಗ್ಗ ತಾಲ್ಲೂಕು ತುಪ್ಪೂರು ಗ್ರಾಮದ NH-206 ರ ಪಕ್ಕದಲ್ಲಿರುವ 1947ರ ಸಾಗುವಾನಿ ನೆಡುತೋಪಿನ ಹತ್ತಿರ ಕಾಯುತ್ತಿರುವಾಗ ಬೆಳಗಿನ ಜಾವ 5-40ರ ಸಮಯದಲ್ಲಿ ನೆಡುತೋಪಿನಿಂದ ಒಂದು ವಾಹನ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನಿಂದ ನಿಲ್ಲಿಸಲು ಸೂಚಿಸಿದರು. ಸದರಿ ವಾಹನ ನಿಲ್ಲಿಸದೇ ವೇಗವಾಗಿ ಮುಂದೆ ಚಲಿಸಿದಾಗ ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಹೋದಾಗ NH-206 ರ ಆನೆಮುರಿ ಬಳಿ ಹಿಂದಿನ ಚಕ್ರ ಪಂಕ್ಚರ್ ಆಗಿ ಪಲ್ಟಿ ಹೊಡೆದು ನಿಂತಿರುವುದು ಕಂಡುಬಂದಿತು. ವಾಹನದೊಳಗಿದ್ದ ನಾಟಾ ತುಂಡುಗಳು ಚೆಲ್ಲಾಪಿಲ್ಲಿ ಆಗಿ ಬಿದ್ದಿರುವುದು ಕಂಡುಬಂದಿತು. ವಾಹನ ಪರಿಶೀಲಿಸಲಾಗಿ, ಬೊಲೆರೋ ಪಿಕ್‌ಅಪ್ ನಂಬರ್ ಕಂಡುಬಂದಿರುವುದಿಲ್ಲ. ಛಾಸ್ಸಿಸ್ ನಂ: MA-122-GGA-81-K-54606, ಇಂಜಿನ್ ನಂ: QG-81-K-52817 ಆಗಿದ್ದು, ನಾಟಾಗಳನ್ನು ಪರಿಶೀಲಿಸಿದಾಗ 15 ಸಾಗುವಾನಿ ಮತ್ತು 02 ಬೀಟೆ ನಾಟಾಗಳಿದ್ದು, ಈ ನಾಟಾಗಳಿಗೆ ಇಲಾಖಾ ಛಾಪಾದ ಗುರುತಿರಲಿಲ್ಲ. ಹಾಗೂ ಈ ನಾಟಾಗಳ ಸಾಗಾಣಿಕೆಗೆ ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ನಾಟಾ ತುಂಡುಗಳನ್ನು ಅಳತೆ ಮಾಡಿ ಒಟ್ಟು 17=2.381 ಎಂ3 ಪ್ರಮಾಣವಿರುತ್ತದೆ. ವಾಹನ, ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅ.ಮೊ.ಸಂಖ್ಯೆ 102/08-09ನ್ನು ದಾಖಲಿಸಿರುತ್ತಾರೆ. ನಂತರ ಈ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ "ಬಿ" ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ, ದಾವಣಗೆರೆ ಇವರಿಗೆ ಬಿ3-ಅಮೊ-ವಾಹನ-ವಿವ-43/08-09 ದಿ:23-03-2009 ರಂದು ಪತ್ರ ಬರೆದು ಕೋರಲಾಯಿತು. ಸಾರಿಗೆ ಅಧಿಕಾರಿ, ದಾವಣಗೆರೆ ಇವರು ಈ ವಾಹನದ "ಬಿ" ಎಕ್ಸ್‌ಟ್ರ್ಯಾಕ್ಟ್‌ನ್ನು ದಿ:24-03-2009 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ "ಬಿ" ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಶ್ರೀ ಎಂ.ವಿ. ಪ್ರೇಮ್‌ಕುಮಾರ್ ಎಂದು ಆರ್.ಸಿ. ಮಾಲೀಕರ ಹೆಸರು ನಮೂದಿಸಲಾಗಿತ್ತು,ಮತ್ತು ಜಪ್ತಾದ ವಾಹನದ ಛಾಸ್ಸಿಸ್ ನಂಬರ್, ಇಂಜಿನ್ ನಂಬರ್ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ಛಾಸ್ಸಿಸ್ ನಂಬರ್, ಇಂಜಿನ್ ನಂಬರ್‌ಗೆ ತಾಳೆಯಾಗಿರುತ್ತದೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಿಗೆ ದಿ:25-03-2009 ರಂದು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ಕಾರಣ ಕೇಳಿ ನೋಟಿಸ್‌ನ್ನು 30 ದಿನಗಳ ಕಾಲವಕಾಶ ನೀಡಿ ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಆರ್.ಸಿ. ಮಾಲೀಕರು ಸ್ವೀಕರಿಸದಕ್ಕೆ ಸ್ವೀಕೃತಿ ಈ ನ್ಯಾಯಾಲಯಕ್ಕೆ ಅಂಚೆ ಇಲಾಖೆಯವರು ಸಲ್ಲಿಸಿರುತ್ತಾರೆ.

ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡಲು ವಕೀಲರ ಮುಖಾಂತರ ದಿ:18-03-2009 ರಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ. ಇವರ ಕೋರಿಕೆಯನ್ನು ದಿ:26-09-2009 ರಂದು ತಿರಸ್ಕರಿಸಿ ಈ ನ್ಯಾಯಾಲಯದಿಂದ ಆದೇಶ ಹೊರಡಿಸಿರುತ್ತದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಬಿ.ಸಿ.ಲೋಕೇಶ್, ವನಪಾಲಕ ಅರಣ್ಯ ಸಂಚಾರಿದಳ, ಮೈಸೂರು ಇವರನ್ನು (ಹಿಂದೆ ಗೌತಮಪುರ ಶಾಖೆಯಲ್ಲಿ ವನಪಾಲಕನಾಗಿ ಕರ್ತವ್ಯ ನಿರ್ವಹಿಸಿರುವ) ದಿ:30-10-2010 ರಂದು ನ್ಯಾಯಾಲಯಕ್ಕೆ ಕರೆಸಿ ಸತ್ಯಪ್ರತಿಜ್ಞೆ ಬೋಧಿಸಲಾಯ್ತು. ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ನಾನು 2006 ರಿಂದ 2010 ರವರೆಗೆ ಆನಂದಪುರಂ ವಲಯದ ಗೌತಮಪುರ ಶಾಖೆಯಲ್ಲಿ ವನಪಾಲಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿ:23-02-2009 ರಂದು ವಲಯ ಅರಣ್ಯಾಧಿಕಾರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ವಲಯ ಅರಣ್ಯಾಧಿಕಾರಿ ಮತ್ತು ಇತರೆ ಸಿಬ್ಬಂದಿಗಳೊಂದಿಗೆ NH-206 ರಸ್ತೆ ಪಕ್ಕದ ಸಾಗುವಾನಿ ನೆಡುತೋಪಿನಲ್ಲಿ ಕಾಯುತ್ತಿರುವಾಗ ನೆಡುತೋಪಿನಿಂದ ಒಂದು ವಾಹನ

ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದರು. ನಿಲ್ಲಿಸದೇ ವೇಗವಾಗಿ ತುಪ್ಪೂರು ಕಡೆ ಹೋಗಿದ್ದು, ಅದನ್ನು ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಗಾಳಿಯಲ್ಲಿ ಎರಡು ಬಾರಿ ಗುಂಡು ಹಾರಿಸಿದೆವು. ಆನೆಮುರಿ ತಿರುವಿನ ಬಳಿ ವಾಹನದ ಹಿಂದಿನ ಚಕ್ರ ಪಂಕ್ಚರ್ ಆಯಿತು. ವಾಹನದಲ್ಲಿದ್ದ ಆಸಾಮಿಗಳು ತಲೆಮರೆಸಿಕೊಂಡರು. ವಾಹನದಲ್ಲಿದ್ದ ತುಂಡುಗಳು ಆಗತಾನೆ ಕತ್ತರಿಸಿದ ಹಸಿ ತುಂಡುಗಳಾಗಿದ್ದು, ಇಲಾಖಾ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ತುಂಡುಗಳನ್ನು ಅಳತೆ ಮಾಡಿ ಕ್ರಮ ಸಂಖ್ಯೆ ಕೊಟ್ಟು ಮಹಜರ್ ಕ್ರಮದಡಿ ಇಲಾಖಾ ಪರ ವಶಪಡಿಸಿಕೊಂಡು ಕೇಸು ದಾಖಲಿಸಿದೆ. ಸ್ಥಳದಲ್ಲಿ ಮಾಡಿದ ಮಹಜರ್‌ಗೆ ನಿಪಿ–1 ಎಂದು, ಅದರಲ್ಲಿನ ಸಹಿಗೆ ನಿಪಿ–1(ಎ) ಎಂದು ಪ್ರಥಮ ವರ್ತಮಾನ ವರದಿ ನಿಪಿ–2 ಎಂದು, ಅದರಲ್ಲಿದ್ದ ನನ್ನ ಸಹಿಯನ್ನು ನಿಪಿ–2(ಎ) ಎಂದು, ಜಪ್ತು ವರದಿಯನ್ನು ನಿಪಿ–3 ಅದರಲ್ಲಿನ ನನ್ನ ಸಹಿಯನ್ನು ನಿಪಿ–3(ಎ) ಎಂದು ಗುರುತಿಸಿದೆ." ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪುನ: ಸಾಕ್ಷಿಯನ್ನು ದಿ:23–07–2011ರಂದು ಕರೆಸಿ, ಸತ್ಯಪ್ರತಿಜ್ಞೆ ಬೋಧಿಸಲಾಯ್ತು. ಪಾಟಿಸವಾಲನ್ನು ZA ವಕೀಲರಿಂದ "ಪ್ರಕರಣ ಪತ್ತೆಹಚ್ಚಲು 5 ಜನ ಹೋದೆವು. ದಾಳಿಗೆ ಹೋಗುವ ಪೂರ್ವದಲ್ಲಿ ಪ್ರಥಮ ವರ್ತಮಾನ ವರದಿ ದಾಖಲಿಸಿದ್ದೇವೆ. ನಾವು ಬೀಟ್ ಮಾಡಿದ ಬಗ್ಗೆ ದಿನಚರಿ ಬರೆಯುತ್ತೇವೆ. ಕರಡಿಬೆಟ್ಟ ಮೀಸಲು ಅರಣ್ಯದ ಸಾಗುವಾನಿ ನೆಡುತೋಪಿನಲ್ಲಿ ಅಕ್ರಮ ಕಡಿತಲೆಯಾಗುತ್ತದೆಂದು ಮಾಹಿತಿ ಬಂದಿತ್ತು. ಸ್ಥಳಕ್ಕೆ ಹೋದಾಗ ಬೆಳಗಿನ ಜಾವ 5–40ರ ಸಮಯವಾಗಿತ್ತು. ನೆಡುತೋಪಿನ ಸುತ್ತಲು ಅಗಳವಿರುತ್ತದೆ. ರಸ್ತೆಯ ಪಕ್ಕದ ಅಗಳನ್ನು ಮುಚ್ಚಿ ಕಾಡಿನೊಳಗಿನಿಂದ ಒಂದು ವಾಹನ ಹೆಡ್‌ಲೈಟ್ ಬೆಳಕಿನೊಂದಿಗೆ ಹೊರಗೆ ಬಂದಿತು. ನಿಲ್ಲಿಸಲು ಸೂಚಿಸಿದರು ವಾಹನ ನಿಲ್ಲಿಸದೇ ಇರುವುದರಿಂದ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡುತ್ತಿರಬಹುದೆಂದು ಅನುಮಾನ ಬಂದಿತು. ಕೂಡಲೇ ಬಂದೂಕಿನಿಂದ ಗಾಳಿಯಲ್ಲಿ ಗುಂಡು ಹಾರಿಸಿದೆವು. ಸ್ವಲ್ಪದೂರ ಬೆನ್ನಟ್ಟಿದಾಗ ವಾಹನ ಟೈರ್ ಪಂಕ್ಚರ್ ಆಗಿ ನಿಂತಿತು. ವಾಹನದಲಿದ್ದ ನಾಟಾಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಅಲ್ಲಿ ಯಾವುದೇ ಜನವಿರಲಿಲ್ಲ. ಅಲ್ಲಿಂದ ತುಪ್ಪೂರಿಗೆ 1 ಕಿ.ಮೀ. ಅಂತರವಿದೆ. ಬೀಟೆ ಮರದ ಬುಡಗಳನ್ನು ಪತ್ತೆಹಚ್ಚಿ ಅಳತೆ ಮಾಡಿದೆ. ಆರೋಪಿ ಪತ್ತೆಯಾಗದ ತುಂಡುಗಳನ್ನು ಹಾಕಿ ಕೇಸು ಮಾಡಿರುವುದಿಲ್ಲ. ಪಂಕ್ಚರ್ ಆಗಿ ನಿಂತ ವಾಹನಕ್ಕೆ ನಾಟಾ ಹಾಕಿ ಸುಳ್ಳುಕೇಸು ಹಾಕಿರುವುದಿಲ್ಲ."

ಡಿಫೆನ್ಸ್ ಸಾಕ್ಷಿ ಶ್ರೀ ಪ್ರೇಮ್‌ಕುಮಾರ್‌ನ್ನು ದಿ:30–07–2011ರಂದು ಈ ನ್ಯಾಯಾಲಯಕ್ಕೆ ಕರೆಸಿ ಸತ್ಯಪ್ರತಿಜ್ಞೆ ಬೋಧಿಸಲಾಯಿತು. ಮುಖ್ಯ ವಿಚಾರಣೆ ZA ವಕೀಲರಿಂದ "ಈ ಪ್ರಕರಣದಲ್ಲಿ ಜಪ್ತಾದ ನೊಂದಣಿಯಾಗದ ವಾಹನ ನನ್ನದು. ಈ ವಾಹನವನ್ನು ತರಕಾರಿ ಸಾಗಿಸಲು ಬಾಡಿಗೆಗಾಗಿ ಖರೀದಿಸಿರುತ್ತೇನೆ. ಈ ವಾಹನವನ್ನು ಮಹೇಂದ್ರ ಫೈನನ್ಸ್‌ನಲ್ಲಿ ಸಾಲ ಮಾಡಿ ಖರೀದಿಸಿರುತ್ತೇನೆ. ನನ್ನ ಅಕ್ಕನ ಮಗನನ್ನು ಚಾಲಕನನ್ನಾಗಿ ನೇಮಿಸಿ ಆನಂದಪುರಂದಲ್ಲಿ ತರಕಾರಿ ತುಂಬಿಸಿ ಕಳುಹಿಸಿರುತ್ತೇನೆ. ತರಕಾರಿ ಡೆಲಿವರಿಕೊಟ್ಟು ನಂತರ ರಿಪೇರಿ ಸಲುವಾಗಿ ಶಿವಮೊಗ್ಗಕ್ಕೆ ಬರುತ್ತಿರುವಾಗ ಆನೆಮುರಿ ಹತ್ತಿರ ಟೈರ್ ಪಂಕ್ಚರ್ ಆಗಿರುತ್ತದೆ. ಚಾಲಕ ಟೈರ್ ಪಂಕ್ಚರ್ ಹಾಕಿಸಲು ಶಿವಮೊಗ್ಗಕ್ಕೆ ಬಂದಿರುತ್ತಾನೆ. ವಾಹನ ಶಿವಮೊಗ್ಗಕ್ಕೆ ಬಾರದ ಕಾರಣ, ನಾನೇ ಆನಂದಪುರಂ ಕಡೆಗೆ ವಾಹನ ನೋಡುತ್ತಾ ಹೋದೆ ಚೋರಡಿಯಲ್ಲಿ ವಿಚಾರಿಸಿದಾಗ ಅರಣ್ಯ ಇಲಾಖೆಯವರು ವಾಹನ ತೆಗೆದುಕೊಂಡು ಹೋದ ಬಗ್ಗೆ ತಿಳಿಸಿರುತ್ತಾರೆ. ವಾಹನದ ಮೇಲೆ ಸುಳ್ಳುಕೇಸು ದಾಖಲಿಸಿರುತ್ತಾರೆ. ಚಾಲಕನನ್ನು ವಿಚಾರಿಸಿದಾಗ ಯಾವುದೇ ನಾಟಾ ವಾಹನದಲ್ಲಿ ಕಳ್ಳಸಾಗಾಣಿಕೆ ಮಾಡಿಲ್ಲವೆಂದು ತಿಳಿಸಿದ. ನನ್ನ ಮೇಲಾಗಲೀ, ಚಾಲಕನ ಮೇಲಾಗಲೀ ಕೇಸು ದಾಖಲಿಸಿರುವುದಿಲ್ಲ. ವಾಹನ ಬಿಟ್ಟುಕೊಡಲು ಕೋರಿರುತ್ತೇನೆ."

ಪಾಟಿಸವಾಲು ಸಹಾಯಕ ಸರ್ಕಾರಿ ಅಭಿಯೋಜಕರಿಂದ "ಘಟನಾ ಪೂರ್ವದಲ್ಲಿ 3 ರಿಂದ 4 ತಿಂಗಳ ಹಿಂದೆ ವಾಹನ ಖರೀದಿಸಿದೆ. ವಾಹನ ಖರೀದಿಸಿದ ತಕ್ಷಣ ಎಲ್ಲಾ ದಾಖಲೆ ಕೊಟ್ಟಿರುತ್ತಾರೆ ಎಂದರೆ ಸರಿಯಲ್ಲ. ಹಿತ್ಲ, ಕಲ್ಮನೆ ಗ್ರಾಮದ 7–8 ಜನರ ತರಕಾರಿಗಳನ್ನು ನನ್ನ ವಾಹನಕ್ಕೆ ತುಂಬಿ ಆನಂದಪುರಂ ಬಸ್ ನಿಲ್ದಾಣದ ಬಳಿ ತೆಗೆದುಕೊಂಡು ಹೋಗಲು ತಿಳಿಸಿದೆ. ನನ್ನ ಹೊಸ ವಾಹನವನ್ನು ಸರ್ವೀಸ್ ಮಾಡಿಸಿದೆ, ವಾಹನ ಸುಸ್ಥಿತಿಯಲ್ಲಿತ್ತು. ವಾಹನದಲ್ಲಿದ್ದ ಟೈರ್‌ಗಳು ಕಂಪೆನಿಯಿಂದ ಕೊಟ್ಟ ಹೊಸ ಟೈರ್‌ಗಳಾಗಿರುತ್ತವೆ. ಆನೆಮುರಿ ಹತ್ತಿರ ಗಾಡಿ ಪಂಕ್ಚರ್ ಆದ ವಿಷಯ ಪೋನ್ ಮೂಲಕ ಬೆಳಿಗ್ಗೆ 6–30ಕ್ಕೆ ತಿಳಿಸಿರುತ್ತಾನೆ. ಕೆಲವೊಮ್ಮೆ ಪಂಕ್ಚರ್ ಆದಾಗ ಚಾಲಕನೇ ಪಂಚರ್ ಸರಿಪಡಿಸಿ ವಾಹನ ತರುತ್ತಾನೆ. ದಿ:23–02–2009ರ ಹಿಂದಿನ ದಿನದಂದು ಚಾಲಕನ ಮೂಲಕ ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸಲು ಕಳುಹಿಸಿದೆ ಎಂದರೆ ಸರಿಯಲ್ಲ. ಆ ದಿನ ನನ್ನ ವಾಹನದಲ್ಲಿ ಬೀಟೆ ಮತ್ತು ಸಾಗುವಾನಿ 17 ನಾಟಾಗಳನ್ನು ತುಂಬಿಸಿದ್ದು, ತಿರುವಿನಲ್ಲಿ ಒತ್ತಡ ಹೆಚ್ಚಾಗಿ ಟೈರ್ ಪಂಕ್ಚರ್ ಆಗಿ ಪಲ್ಟಿ ಹೊಡೆದು ತುಂಡು ಚಲ್ಲಾಚಿಲ್ಲಿಯಾದವು ಎಂದರೆ ಸರಿಯಲ್ಲ. ಚೋರಡಿ ಅರಣ್ಯ ಇಲಾಖೆಯವರು ನನ್ನನ್ನು ತನಿಖೆ ಮಾಡಲು ಬಂದಾಗ ತಪ್ಪಿಸಿಕೊಂಡು ಓಡುತ್ತಿದ್ದೆ ಎಂದರೆ ಸರಿಯಲ್ಲ. ನಾನು ನನ್ನ ವಾಹನವನ್ನು ಬಿಡಿಸಿಕೊಳ್ಳುವ ಸಲುವಾಗಿ ಸುಳ್ಳುಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ".

ಡಿಫೆನ್ಸ್ ಕಡೆಯ ವಕೀಲರಿಗೆ ವಾದ ಮಂಡಿಸಲು ದಿ:20–08–2011, 27–08–2011, 17–09–2011, 24–09–2011, 29–10–2011, 19–11–2011, 31–12–2011, 07–01–2012 ಮತ್ತು 03–03–2012 ಒಟ್ಟು 10 ಬಾರಿ ದಿನಾಂಕ ನಿಗಧಿಪಡಿಸಿದ್ದರೂ ವಾದ ಮಂಡಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮಕೈಗೊಳ್ಳಲು ತೀರ್ಮಾನಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–03–2012ರಂದು ವಾದಮಂಡಿಸಿ, ಈ ವಾಹನದಲ್ಲಿ ಬೀಟೆ ಮತ್ತು ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಚೋರಡಿ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಗಳು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯೊಂದಿಗೆ ವಾಹನದ ಮೇಲೆ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಹಾಗೂ ವಲಯ ಅರಣ್ಯಾಧಿಕಾರಿ ಎಲ್ಲಾ ದಾಖಲೆಗಳನ್ನು ಮತ್ತು ವಾಹನವನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ನಿರ್ಧರಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.**

1. ಬೊಲೆರೋ ಪಿಕ್‌ಅಪ್ ವಾಹನ ನಂ:ಕೆಎ–17–ಟಿಆರ್‌ಎಸ್–2040 ರಲ್ಲಿ ಅರಣ್ಯ ಉತ್ಪನ್ನವಾದ ಬೀಟೆ ನಾಟಾ 02=0.218 ಎಂ3 ಮತ್ತು ಸಾಗುವಾನಿ ನಾಟಾ 15=2.163 ಒಟ್ಟು 17=2.381 ಎಂ3ನ್ನು ದಿ:23–02–2009 ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಸದರಿ ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ಮತ್ತು ಸಾಗುವಾನಿ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:23–02–2009 ರಂದು ಆನಂದಪುರಂ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿವಮೊಗ್ಗ ತಾ. ತುಪ್ಪೂರು ಗ್ರಾಮದ NH–206 ರ ಪಕ್ಕದಲ್ಲಿರುವ 1947ರ ಸಾಗುವಾನಿ ನೆಡುತೋಪಿನಲ್ಲಿ ಕಾಯುತ್ತಿರುವಾಗ ಒಂದು ಬೊಲೆರೊ ಪಿಕ್‌ನಲ್ಲಿ 02 ಬೀಟೆ ಮತ್ತು 15 ಸಾಗುವಾನಿ ನಾಟಾ ಒಟ್ಟು 2.381 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಹಾಗೂ ಅರಣ್ಯ ಉತ್ಪನ್ನದೊಂದಿಗೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ಮತ್ತು ಸಾಗುವಾನಿ ನಾಟಾವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಎಂ.ವಿ. ಪ್ರೇಮ್‌ಕುಮಾರ್ ಬಿನ್ ವೀರಪ್ಪ, ಮಾರವಳ್ಳಿ ಅಂಚೆ, ಶಿಕಾರಿಪುರ ತಾಲ್ಲೂಕು. ಇವರು ದಿ:18–03–2009ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:25–03–2009ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆದಿದೆ. ಮತ್ತು ಡಿಫೆನ್ಸ್ ಕಡೆಯವರು ವಾದ ಮಂಡಿಸಲು 10 ಬಾರಿ ದಿನಾಂಕ ನೀಡಲಾಗಿದೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:23–02–2009 ರಂದು ಬೊಲೆರೋ ಪಿಕ್‌ಅಪ್ ನಂ: ಕೆಎ–17–ಟಿಆರ್‌ಎಸ್–2040 ರಲ್ಲಿ ಬೀಟೆ ನಾಟಾ 02=0.218 ಮತ್ತು ಸಾಗುವಾನಿ ನಾಟಾ 15=9.163 ಎಂ3 ಒಟ್ಟು ಅಳತೆ 17=2.381 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಚೋರಡಿ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಕೇಸು ದಾಖಲಿಸಿರುತ್ತಾರೆ, ನಂತರ ಸದರಿ ಪ್ರಕರಣದಲ್ಲಿ ಈ ನ್ಯಾಯಾಲಯಕ್ಕೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ವಿಚಾರಣಾ ವರದಿ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಈ ಪ್ರಕರಣದ ಮೇಲಿನ ವಾಸ್ತುವಾಂಶ ಹಾಗೂ ಬಾದ್ಯತೆದಾರರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲೆಗಳ ಪ್ರಕಾರ, ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುಕ್ಕಾಗಾಲೀ, ಅಲ್ಲದೇ ಈ ಪ್ರಕರಣದಲ್ಲಿ ಆರ್.ಸಿ. ಮಾಲೀಕರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುತ್ತಾರೆ.

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ………………………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕರಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ಬೊಲೆರೋ ಪಿಕ್‌ಅಪ್ ನಂ:KA-17 TRS-2040 ವಾಹನ (ಛಾಸ್ಸಿಸ್ ನಂ:MA-122-GGA-81-K-54606, ಇಂಜಿನ್ ನಂ:QG-81-K-52817) ಮತ್ತು ಈ ವಾಹನದಲ್ಲಿದ್ದ ಬೀಟೆ 02=0.218 ಎಂ3 ಮತ್ತು ಸಾಗುವಾನಿ ನಾಟಾ 15=2.163 ಎಂ3 ಒಟ್ಟು ನಾಟಾ 17=2.381 ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:24–03–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ**
**ಸಾಗರ ವಿಭಾಗ, ಸಾಗರ.**

**ಪಿ.ಆರ್. ನಂ. 560**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3: ಅಮೊ: ವಾಹನ:ವಿವ:18/09–10, ದಿನಾಂಕ:24–03–2012**

**ಉಪಸ್ಥಿತರು** : ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** : ಶ್ರೀ ಗಣೇಶ್ ಕೆ.ಜಿ. ಬಿನ್ ಗಿರಿಯಪ್ಪ, 33 ವರ್ಷ, ವ್ಯಾಪಾರಸ್ಥರು ಕೋಣಂದೂರು–ಅಂಚೆ, ತೀರ್ಥಹಳ್ಳಿ ತಾ॥ ಶಿವಮೊಗ್ಗ ಜಿಲ್ಲೆ

**ಪ್ರಸ್ತಾವನೆ:–**

ದಿ:22–08–2009 ರಂದು ಒಂದು ವಾಹನದಲ್ಲಿ ಬೀಟೆ ನಾಟಾ ಅಕ್ರಮ ಸಾಗಾಣಿಕೆ ಮಾಡುತ್ತಿರುವಾಗ ಕೋಡೂರು ಶಾಖೆ ವನಪಾಲಕರು ಪತ್ತೆಹಚ್ಚಿ ಬರೆದ ಮಹಜರ್ ಕ್ರಮ ಈ ಕೆಳಗಿನಂತಿದೆ.

ದಿ:22–08–2009 ರಂದು ಹೊಸನಗರ ವಲಯದ ಕೋಡೂರು ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾ॥ ಹುಂಚ ಹೋಬಳಿ ಹಿರೇಜೆನಿ ಗ್ರಾಮದ ಕರಿಗರಸು ಬಸ್‌ಸ್ಟಾಂಡ್‌ನಿಂದ ಗರ್ತಿಕೆರೆಗೆ ಹೋಗುವ ಡಾಂಬರ್ ರಸ್ತೆಯ ಪಕ್ಕದಲ್ಲಿರುವ ಸಾಗುವಾನಿ ನೆಡುತೋಪಿನ ಹತ್ತಿರ ಬಂದು ನೋಡುವಾಗ ಒಂದು ಮಾರುತಿ ವ್ಯಾನ್ ಕೆಎ–14–ಎಂ–8516 ನಿಂತಿರುವುದು ಕಂಡುಬಂದಿರುತ್ತದೆ. ಈ ವಾಹನದೊಳಗಡೆ 3 ಜನ ಆಸಾಮಿಗಳಿದ್ದು, ಅವರ ಹೆಸರು ವಿಳಾಸ ವಿಚಾರಿಸಲಾಗಿ (1)ಪ್ರಶಾಂತ ಬಿನ್ ಉಪೇಂದ್ರ, 24 ವರ್ಷ, ಮಳಲಿ ವಾಸಿ (2)ರಾಘವೇಂದ್ರ ಬಿನ್ ನಾಗಪ್ಪ, 28 ವರ್ಷ, ಕೆಸವಿನಮನೆ ವಾಸಿ, (3)ಸಂತೋಷ ಬಿನ್ ತಿಮ್ಮಪ್ಪಗೌಡ, ಯೋಗಿಮಳಲಿ ಗ್ರಾಮ ಎಂದು ತಿಳಿಸಿದರು. ವಾಹನದೊಳಗಡೆ ಪರಿಶೀಲಿಸಿ ನೋಡಲಾಗಿ ಸಾಗುವಾನಿ 04 ನಾಟಾ = 0.175 ಎಂ3 ಮತ್ತು ಬೀಟೆ 04 ನಾಟಾ 0.106 ಎಂ3 ಇದ್ದು, ಮತ್ತು ವಾಹನದ ಹೊರಗಡೆ ಸಾಗುವಾನಿ ನಾಟಾ 35=1.595 ಎಂ3 ಮತ್ತು ಬೀಟೆ 04 ನಾಟಾ 0.328 ಎಂ3 ಹಾಗೂ 2 ಗರಗಸವಿದ್ದು, ಈ ತುಂಡುಗಳನ್ನು ಗರಗಸದಿಂದ ಕೊಯ್ತ ಮಾಡಿದಾಗಿದ್ದು, ಈ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ. ಇದನ್ನು ಸಾಗಿಸಲು ಯಾವುದೇ ರಹದಾರಿ ಇಲ್ಲವೆಂದು ಸಿಕ್ಕಿಬಿದ್ದ ಆಸಾಮಿಗಳು ತಿಳಿಸಿರುತ್ತಾರೆ. ಮತ್ತು ಸುಮಾರು 200 ಮೀಟರ್ ದೂರದಲ್ಲಿ ಒಂದು ಲಾರಿಯಲ್ಲಿ ಬಹಳಷ್ಟು ಜನರು ಕೂಗೂತ್ತಾ ಬರುತ್ತಿದ್ದರು. ಅದಕ್ಕೆ ಇಲಾಖೆಯವರು ಡಬಲ್ ಬ್ಯಾರಲ್ ಗನ್‌ನಿಂದ ಗಾಳಿಯಲ್ಲಿ 3 ಸುತ್ತು ಗುಂಡುಹಾರಿಸಿದಾಗ ಲಾರಿಯು ವಾಪಾಸ್ಸು ಹೋಯಿತು. ಹೊರಗಡೆಯಿದ್ದ ಬೀಟೆ, ಸಾಗುವಾನಿ ನಾಟಾಗಳನ್ನು ಲಾರಿಯಲ್ಲಿ ಸಾಗಿಸುವ ಸಂಭವ ಇತ್ತದೆಂದು ತಿಳಿದುಬಂದಿದ್ದು, ಈ ಮಾರುತಿ ವ್ಯಾನಿನಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಆಸಾಮಿಗಳನ್ನು ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಇಲಾಖಾ ಪರ ಜಪ್ತುಪಡಿಸಿಕೊಂಡು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪ ನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:46/09–10ನ್ನು ದಾಖಲಿಸಲಾಯಿತು. ನಂತರ ವಾಹನ, ಅರಣ್ಯ ಉತ್ಪನ್ನ ಮತ್ತು ಸಿಕ್ಕಿಬಿದ್ದ ಆಸಾಮಿಗಳನ್ನು ವನಪಾಲಕರು ದಾಖಲೆಗಳೊಂದಿಗೆ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಆಸಾಮಿಗಳನ್ನು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಒಪ್ಪಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ಸದರಿ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಮತ್ತು ಈ ವಾಹನ ಸುರಕ್ಷತೆಗಾಗಿಡಲು ಈ ನ್ಯಾಯಾಲಯದಿಂದ ಆದೇಶವಾಗಿರುತ್ತದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್ ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರಿಗೆ ಈ ನ್ಯಾಯಾಲಯದ ಪತ್ರ ಸಂ:ಬಿ3.ಅಮೊ.ವಾಹನ.18/09–10 ದಿ:31–08–2009ರಂದು ಕೋರಲಾಗಿದೆ. ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರು ಪತ್ರ ಸಂ:ಪ್ರಾಸಾಅ.ಶಿವ.2009–10 ದಿ:02–07–2009ರಲ್ಲಿ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್ ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು ಶ್ರೀ ಗಣೇಶ್ ಕೆ.ಜಿ. ಬಿನ್ ಗಿರಿಯಪ್ಪ, ವ್ಯವಸಾಯಗಾರರು, ಕೋಣಂದೂರು ಅಂಚೆ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿ. ಎಂದು ಇರುತ್ತದೆ. ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ಕಾರಣ ಕೇಳಿ ನೋಟಿಸ್‌ನ್ನು ದಿ:29–01–2010 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಈ ನೋಟಿಸ್‌ನ್ನು ಆರ್.ಸಿ. ಮಾಲೀಕರು ಸ್ವೀಕರಿಸಿದ ಬಗ್ಗೆ ಸ್ವೀಕೃತಿ ಈ ನ್ಯಾಯಾಲಯಕ್ಕೆ ತಲುಪಿರುತ್ತದೆ.

ಆರ್.ಸಿ. ಮಾಲೀಕರಾದ ಶ್ರೀ ಗಣೇಶ್ ಕೆ.ಜಿ. ಬಿನ್ ಗಿರಿಯಪ್ಪ, ವ್ಯವಸಾಯಗಾರರು, ಕೋಣಂದೂರು ಅಂಚೆ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿ. ಇವರು ವಕೀಲರ ಮುಖಾಂತರ ಈ ವಾಹನ ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿ ದಿ:05–09–2009 ರಂದು ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ವಾಹನ ಮಧ್ಯಂತರ ಅವಧಿಗೆ ಬಿಡುಗಡೆಗೆ ಕೋರಿದ ಆರ್.ಸಿ. ಮಾಲೀಕರ ಅರ್ಜಿಯನ್ನು ದಿ:02–04–2011 ರಂದು ತಿರಸ್ಕರಿಸಿ ಈ ನ್ಯಾಯಾಲಯದಿಂದ ಆದೇಶವಾಗಿದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ನವೀನ್‌ಕುಮಾರ್, ವನಪಾಲಕರನ್ನು ದಿ:02–07–2011 ರಂದು ಈ ನ್ಯಾಯಾಲಯಕ್ಕೆ ಕರೆಸಿ, ಸತ್ಯಪ್ರತಿಜ್ಞೆ ಭೋದಿಸಲಾಯಿತು. ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ಕಳೆದ ಜೂನ್–2009 ರಿಂದ ಹೊಸನಗರ ವಲಯದ ಕೋಡೂರು ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:28–09–2009 ರಂದು ಬಂದ ಖಚಿತ ವರ್ತಮಾನದ ಮೇರೆಗೆ ನಾವು ಮತ್ತು ಸಿಬ್ಬಂದಿಗಳೊಂದಿಗೆ ಹೊಸನಗರ ರಿಪ್ಪನ್‌ಪೇಟೆ ರಸ್ತೆ ಗರ್ತಿಕೆರೆ ಕ್ರಾಸ್ ಬಳಿ ಹೋಗುತ್ತಿದ್ದಾಗ ಅಲ್ಲಿ ಒಂದು ಓಮ್ನಿ ವಾಹನ ನಿಂತಿದ್ದು, ಅದರ ಸಂಖ್ಯೆ ಕೆಎ–14–ಎಂ–8516 ಆಗಿತ್ತು. ಅದರಲ್ಲಿ 3 ಜನ ಆಸಾಮಿಗಳಿದ್ದರು ಅವರನ್ನು ವಿಚಾರಿಸಿ, ವಾಹನವನ್ನು ಪರಿಶೀಲಿಸಿದಾಗ ಅದರಲ್ಲಿ ಒಟ್ಟು 8 ತುಂಡುಗಳಿದ್ದು, ಅವುಗಳಲ್ಲಿ 4 ಬೀಟೆ ಮತ್ತು 4 ಸಾಗುವಾನಿ ತುಂಡುಗಳಾಗಿದ್ದವು. ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾ ಇರಲಿಲ್ಲ. ಅವುಗಳನ್ನು ಸಾಗಿಸಲು ಅವರ ಬಳಿ ಯಾವುದೇ ರಹದಾರಿ ಇರಲಿಲ್ಲ. 3 ಜನರು ತಮ್ಮ ಹೆಸರುಗಳನ್ನು ಪ್ರಶಾಂತ, ರಾಘವೇಂದ್ರ ಮತ್ತು ಸಂತೋಷ ಎಂದು ತಿಳಿಸಿದರು. ಅವರಿಗೆ ಆ ತುಂಡುಗಳ ಬಗ್ಗೆ ವಿಚಾರಿಸಲಾಗಿ ಸಮೀಪದಲ್ಲಿ ಮರ ಕಡಿದ ಜಾಗ ತೋರಿಸಿದರು. ತುಂಡುಗಳ ಮರದ ಬುಡಕ್ಕೆ ತಾಳೆಯಾಗುತ್ತಿತ್ತು. ಸ್ಥಳದಲ್ಲಿ 31 ತುಂಡುಗಳು ಇದ್ದವು. ಒಟ್ಟು 39 ತುಂಡುಗಳನ್ನು ಕ್ರಮ ಸಂಖ್ಯೆ ಕೊಟ್ಟು ಅವುಗಳನ್ನು ಅಳತೆ ಮಾಡಿ ಮತ್ತು ಓಮ್ನಿ ವಾಹನವನ್ನು ಮಹಜರ್ ಮಾಡಿ ಅಮಾನತ್ತು ಪಡಿಸಿಕೊಳ್ಳಲಾಯಿತು. ಸ್ಥಳದಲ್ಲಿ 6 ಸಾಗುವಾನಿ ಮತ್ತು 1 ಬೀಟೆ ಮರವನ್ನು ಕಡಿತಲೆ ಮಾಡಲಾಗಿತ್ತು. ಮತ್ತು 2 ಗರಗಸಗಳನ್ನು ಅಮಾನತ್ತುಪಡಿಸಿಕೊಳ್ಳಲಾಯಿತು. ಆ ಸಮಯದಲ್ಲಿ ಗರ್ತಿಕೆರೆ ಕಡೆ ಮುಖ ಮಾಡಿ ಒಂದು ಲಾರಿ ನಿಂತಿದ್ದು, ಅದರಲ್ಲಿದ್ದ 4–5 ಜನ ಕೂಗಾಡುತ್ತಾ ನಮ್ಮ

ಮೇಲೆ ಹಲ್ಲೆ ಮಾಡಲು ಬರುತ್ತಿದ್ದು ಕೂಡಲೇ ನಾವು ಗಾಳಿಯಲ್ಲಿ ಗುಂಡು ಹಾರಿಸಿದೆವು. ಅವರು ಸ್ಥಳದಲ್ಲಿ ಲಾರಿಯೊಂದಿಗೆ ಓಡಿ ಹೋಗಿರುತ್ತಾರೆ. ಸ್ಥಳದಲ್ಲಿ ಮಾಡಿದ ಮಹಜರ್‌ನ್ನು ಈಗ ನೋಡುತ್ತಿದ್ದು, ಅದನ್ನು ನಿಶಾನೆ–ಪಿ1 ಎಂದು, ಅದರಲ್ಲಿನ ನನ್ನ ಸಹಿಯನ್ನು 1ಎ ಎಂದು ಗುರ್ತಿಸಿದೆ. ಪ್ರಥಮ ವರ್ತಮಾನ ವರದಿಯನ್ನು ನಾನೇ ದಾಖಲಿಸಿದ್ದು, ಅದನ್ನು ನಿಶಾನೆ–ಪಿ2 ಎಂದು, ನನ್ನ ಸಹಿಯನ್ನು 2ಎ ಎಂದು, ಜಪ್ತು ವರದಿಯನ್ನು ನಿಶಾನೆ–ಪಿ3 ಎಂದು, ನನ್ನ ಸಹಿಯನ್ನು 3ಎ ಎಂದು ಗುರ್ತಿಸಿದೆ. 3 ಜನ ಆರೋಪಿಗಳನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಲಾಯಿತು. ಸದರಿ ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ".

ಪಾಟಿಸವಾಲು ಮಾಡಲು ಡಿಫೆನ್ಸ್ ಕಡೆಯವರಿಗೆ ದಿ:23–07–2011, 30–07–2011, 06–08–2011 ರಂದು ದಿನಾಂಕ ನೀಡಿ ನೋಟಿಸ್ ನೀಡಲಾಗಿತ್ತು. ಡಿಫೆನ್ಸ್ ಕಡೆಯ ವಾಹನ ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗಿರುವುದಿಲ್ಲ. ಇದರಿಂದ ಈ ಪ್ರಕರಣದಲ್ಲಿ ಮುಂದಿನ ವಿಚಾರಣೆ ನಿಗಧಿಪಡಿಸಲಾಯಿತು.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:20–08–2011, 27–08–2011 ರಂದು ಎರಡು ಬಾರಿ ಮತ್ತು ವಾದಮಂಡಿಸಲು ದಿ:17–09–2011, 01–10–2011, 29–10–2011 ರಂದು ಮೂರು ಬಾರಿ ದಿನಾಂಕ ನೀಡಿದ್ದರು, ಸಹಾ ವಾಹನ ಮಾಲೀಕರಾಗಲೀ, ವಕೀಲರಾಗಲೀ ವಿಚಾರಣೆಗೆ ಹಾಜರಾಗಿರುವುದಿಲ್ಲ. ಇದರಿಂದ ಈ ಪ್ರಕರಣದಲ್ಲಿ ಡಿಫೆನ್ಸ್ ಕಡೆಯವರಿಗೆ ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಆಸಕ್ತಿ ಇಲ್ಲವೆಂದು ಪರಿಗಣಿಸಿ ಮುಂದಿನ ಕ್ರಮಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:29–10–2011ರಂದು ವಾದಮಂಡಿಸಿ, "ಈ ವಾಹನದಲ್ಲಿ ಸಾಗುವಾನಿ ಮತ್ತು ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಹೊಸನಗರ ವಲಯದ ಕೋಡೂರು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಗಳು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯೊಂದಿಗೆ ಆರೋಪಿಗಳ ಮತ್ತು ವಾಹನದ ಮೇಲೆ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಹಾಗೂ ವಲಯ ಅರಣ್ಯಾಧಿಕಾರಿಗಳ ಮುಖಾಂತರ ನ್ಯಾಯಾಲಯಕ್ಕೆ ಎಲ್ಲಾ ದಾಖಲೆಗಳನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ." ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ನಿರ್ಧರಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.**

1. ಮಾರುತಿ ವ್ಯಾನ್ ವಾಹನ ನಂ:ಕೆಎ–14–ಎಂ–8516 ದಿ:22–08–09 ರಂದು ಅರಣ್ಯ ಉತ್ಪನ್ನವಾದ ಬೀಟೆ ನಾಟಾ 04=0.106 ಎಂ3 ಮತ್ತು ಸಾಗುವಾನಿ ನಾಟಾ 04=0.175 ಎಂ3ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಮಾರುತಿ ವ್ಯಾನ್‌ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ಮತ್ತು ಸಾಗುವಾನಿ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?
4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:22–08–2009 ರಂದು ಹೊಸನಗರ ವಲಯದ ಕೋಡೂರು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾ. ಹುಂಚ ಹೋಬಳಿ ಹಿರೇಜೇನಿ ಗ್ರಾಮದ ಕರಿಗರಸು ಬಸ್‌ಸ್ಟಾಂಡ್‌ನಿಂದ ಗರ್ತಿಕೆರೆಗೆ ಹೋಗುವ ಡಾಂಬರ್ ರಸ್ತೆಯ ಪಕ್ಕದಲ್ಲಿರುವ ಸಾಗುವಾನಿ ನೆಡುತೋಪಿನ ಹತ್ತಿರ ನೋಡಿದಾಗ ಒಂದು ಮಾರುತಿ ವ್ಯಾನ್ ಕೆಎ–14–ಎಂ–8516ರಲ್ಲಿ 3 ಜನ ಸಾಗುವಾನಿ ಮತ್ತು ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸುತ್ತಿರುವುದನ್ನು ಪತ್ತೆಹಚ್ಚಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಅರಣ್ಯ ಮೊಕದ್ದಮೆ ಸಂ:46/09–10ನ್ನು ಕೋಡೂರು ಶಾಖೆಯ

ವನಪಾಲಕರು ದಾಖಲಿಸಿರುತ್ತಾರೆ. ನಂತರ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿ ಮತ್ತು ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಿಸಿ, ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಗಣೇಶ್ ಕೆ.ಜಿ. ಬಿನ್ ಗಿರಿಯಪ್ಪ, 33 ವರ್ಷ, ವ್ಯಾಪರಸ್ಥರು ಕೋಣಂದೂರು–ಅಂಚೆ, ತೀರ್ಥಹಳ್ಳಿ ತಾ॥ ಶಿವಮೊಗ್ಗ ಜಿಲ್ಲೆ ಇವರು ದಿ:05–09–2009 ರಂದು ವಕೀಲರ ಮುಖಾಂತರ ಕ್ಲೇಮು ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)ರ ಪ್ರಕಾರ ಕಾರಣಕೇಳಿ ನೋಟಿಸ್‌ನ್ನು 30 ದಿನಗಳ ಕಾಲವಕಾಶ ನೀಡಿ ದಿ:29–01–2010 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿ ಸ್ವೀಕೃತಿ ಈ ನ್ಯಾಯಾಲಯಕ್ಕೆ ಬಂದಿರುತ್ತದೆ. ನಂತರ ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ಎರಡು ಬಾರಿ ಮತ್ತು ವಾದಮಂಡಿಸಲು ಮೂರು ಬಾರಿ ದಿನಾಂಕಗಳನ್ನು ನೀಡಲಾಗಿತ್ತು. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:22–08–2009 ರಂದು ಮಾರುತಿ ವ್ಯಾನ್ ಕೆಎ–14–ಎಂ–8516 ರಲ್ಲಿ ಬೀಟೆ ನಾಟಾ 04=0.106 ಎಂ3 ಮತ್ತು ಸಾಗುವಾನಿ ನಾಟಾ 04=0.175 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಹೊಸನಗರ ವಲಯದ ಕೋಡೂರು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ವಾಹನ ಮತ್ತು ಅರಣ್ಯ ಉತ್ಪನ್ನದೊಂದಿಗೆ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಈ ಪ್ರಕರಣದ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಈ ಪ್ರಕರಣದ ಮೇಲಿನ ವಾಸ್ತುವಾಂಶ ಹಾಗೂ ಬಾದ್ಯತೆದಾರರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲೆಗಳ ಪ್ರಕಾರ, ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುಕ್ಕಾಗಾಲೀ, ಅಲ್ಲದೇ ಈ ಪ್ರಕರಣದಲ್ಲಿ ಆರ್.ಸಿ. ಮಾಲೀಕರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುತ್ತಾರೆ.

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ………………………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕರಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**–:: ಆದೇಶ ::–**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ

(ಜಿ) ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಜಪ್ತು ಮಾಡಿದ ಮಾರುತಿ ವ್ಯಾನ್ ಕೆಎ–14–ಎಂ–8516 ವಾಹನ (ಇಂಜಿನ್ ನಂ: F-8-BIN-382485, ಛಾಸ್ಸಿಸ್ ನಂಬರ್: XMA-3EVB-IIX-00869235-X-G7) ಮತ್ತು ಈ ಪ್ರಕರಣದಲ್ಲಿ ಜಪ್ತಾದ ಬೀಟೆ ನಾಟಾ 08=0.434 ಎಂ3 ಮತ್ತು ಸಾಗುವಾನಿ ನಾಟಾ 31=1.674 ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:24–03–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ**
**ಸಾಗರ ವಿಭಾಗ, ಸಾಗರ.**

**ಪಿ.ಆರ್. ನಂ. 557**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ

**ಕ್ರ: ಬಿ3: ಅಮೋ:ವಾಹನ:ವಿವ:29/08–09, ದಿನಾಂಕ: 24–03–2012**

**ಉಪಸ್ಥಿತರು** : ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಅಂಬ್ಲಿಗೊಳ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಭಾದ್ಯತೆದಾರರು** : ಪುಟ್ಟಪ್ಪ ಬಿನ್ ರಾಮಪ್ಪ, 80 ವರ್ಷ, ಕಾಳೇಶ್ವರ ವಾಸಿ, ಕೆರೆಹಳ್ಳಿ ಹೋಬಳಿ, ಹೊಸನಗರ ತಾಲ್ಲೂಕು ಇವರ ಜಿ.ಪಿ.ಎ.ದಾರರಾದ ಹುಚ್ಚಪ್ಪ ಬಿನ್ ಪುಟ್ಟಪ್ಪ, 30 ವರ್ಷ, ಕಾಳೇಶ್ವರ ವಾಸಿ, ಹೊಸನಗರ ತಾಲ್ಲೂಕು (ಶ್ರೀ ಟಿ.ಬಿ. ಮಂಜುನಾಥ ಶೆಟ್ಟಿ, ವಕೀಲರು, ಸಾಗರ)

**ಪ್ರಸ್ತಾವನೆ:–**

ದಿ: 02–11–2008 ರಂದು ಒಂದು ವಾಹನ ನಂ:ಕೆಎ–15–5066 ರಲ್ಲಿ ಸಾಗುವಾನಿ ನಾಟಾ ಅಕ್ರಮ ಸಾಗಾಣಿಕೆಯನ್ನು ಅಂಬ್ಲಿಗೊಳ ವಲಯದ ವಲಯಾರಣ್ಯಾಧಿಕಾರಿ ಪತ್ತೆಹಚ್ಚಿ ಬರೆದ ಮಹಜರ್ ವಿವರ ಈ ಕೆಳಗಿನಂತಿದೆ.

ದಿ: 02–11–2008ರಂದು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ಮತ್ತು ಸಿಬ್ಬಂದಿಗೆ ಬಂದ ಖಚಿತ ವರ್ತಮಾನದಂತೆ, ಶಿಕಾರಿಪುರ ತಾಲ್ಲೂಕು ಅಂಬ್ಲಿಗೊಳ ವಲಯ ಅರಣ್ಯಾಧಿಕಾರಿಗಳ ಕಛೇರಿ ಎದುರುಗಡೆ ಇರುವ PWD ರಸ್ತೆಯಲ್ಲಿ ಕಾಯುತ್ತಿದ್ದರು. ಆ ಸಮಯದಲ್ಲಿ ಆನಂದಪುರಂ ಕಡೆಯಿಂದ ಒಂದು ಬಿಳಿಯ ಬಣ್ಣದ ಟೆಂಪೋಟ್ರಾಕ್ಸ್ ಪಿಕ್ ಅಪ್ ವ್ಯಾನ್ ನೊಂದಣಿ ಸಂಖ್ಯೆ: ಕೆಎ–15–5066 ಸುಮಾರು ರಾತ್ರಿ 9.00 ಗಂಟೆಯ ಸಮಯದಲ್ಲಿ ಬರುತ್ತಿತ್ತು. ಅದನ್ನು ಇಲಾಖೆಯವರು ನಿಲ್ಲಿಸಲು ಬ್ಯಾಟರಿ ಬೆಳಕಿನ ಸಹಾಯದಿಂದ ಸೂಚಿಸಿದಾಗ ಅದು ನಿಲ್ಲಿಸದೇ ವೇಗವಾಗಿ ಮುಂದೆ ಸಾಗಿರುತ್ತದೆ. ನಂತರ ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಕಾಯುತ್ತಿರುವ ಸ್ಥಳದಿಂದ ಸುಮಾರು 400 ಮೀಟರ್ ದೂರದಲ್ಲಿ ಆ ವಾಹನವನ್ನು ಅಡ್ಡಗಟ್ಟಿ ಅಂಜಾನುಪುರ ಗ್ರಾಮ ಶ್ರೀ ದುರ್ಗಾಂಬ ದೇವಸ್ಥಾನದ ಬಳಿ ನಿಲ್ಲಿಸಲಾಯಿತು. ವಾಹನದಲ್ಲಿದ್ದ ಆಸಾಮಿಗಳು ವಾಹನದಿಂದ ಇಳಿದು ಕೈಗೆ ಸಿಗದೇ ಪರಾರಿಯಾದರು. ನಂತರ ವಾಹನದೊಳಗೆ ಪರಿಶೀಲಿಸಿ ನೋಡಲಾಗಿ ಗರಗಸದಿಂದ ಕೊಯ್ತ ಮಾಡಿದ ಹಸಿಯಾದ ಸಾಗುವಾನಿ 11 ನಾಟಾಗಳಿದ್ದು, ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ತುಂಡುಗಳಿಗೆ ಹಳದಿ ಎಣ್ಣೆ ಕಡ್ಡಿಯಿಂದ ಕ್ರಮಾಂಕ ಕೆಎನ್‌ಎಫ್‌ಡಿ–ಜಿ–78–ಇಇ ಎಂದು ಕೊಟ್ಟು, ವಾಹನದ ಡ್ಯಾಶ್ ಬಾಕ್ಸ್‌ನ್ನು ಪರಿಶೀಲಿಸಲಾಗಿ ಅದರಲ್ಲಿ ಡ್ರೈವಿಂಗ್ ಲೈಸೆನ್ಸ್‌ನ ಮೂಲ ಪ್ರತಿ ಸಿಕ್ಕಿದ್ದು, ಅದರಲ್ಲಿನ ಪೋಟೋದಲ್ಲಿನ ವ್ಯಕ್ತಿಯು ಓಡಿಹೋದ ಈ ವಾಹನದ ಚಾಲಕ ಎಂದು ವನಪಾಲಕ ಗುರುತಿಸಿದರು. ಡ್ರೈವಿಂಗ್ ಲೈಸೆನ್ಸ್‌ನಲ್ಲಿ ಆತನ ಹೆಸರು ಮನುಬಾಬು ಬಿನ್ ಸುರೇಶ್ ಬಾಬು, ಹಾಲುಗುಡ್ಡೆ, ಬಾಳೂರು ಅಂಚೆ, ಹೊಸನಗರ ತಾ. ಎಂದಿದ್ದು, ಈ ವಾಹನಕ್ಕೆ ಸಂಬಂಧಿಸಿದಂತೆ ಇನ್ಶೂರೆನ್ಸ್ ನವೀಕರಣದ ಜೆರಾಕ್ಸ್ ಪ್ರತಿಗಳಿದ್ದು, ಅವುಗಳಲ್ಲಿ ವಾಹನದ ಸಂಖ್ಯೆ: ಕೆಎ–15–5066 ಎಂದಿದ್ದು, ವಾಹನ ಮಾಲೀಕರ ಹೆಸರು ಪುಟ್ಟಪ್ಪ ಬಿನ್ ರಾಮಪ್ಪ, ನಂ:14/1, ಕಾಳೇಶ್ವರ, ಬಾಳೂರು, ಹೊಸನಗರ ತಾ. ಎಂದು ನಮೂದಿಸಿತ್ತು, ತುಂಡುಗಳಿಗೆ 1 ರಿಂದ 11 ಎಂದು, ವಾಹನಕ್ಕೆ 12 ಎಂದು ನಂಬರ್ ಕೊಡಲಾಯಿತು. ನಂತರ 11 ಸಾಗುವಾನಿ ನಾಟಾಗಳನ್ನು ಅಳತೆ ಮಾಡಲಾಗಿ 0.969ಎಂ3ನ್ನು ಪ್ರಮಾಣವಿರುತ್ತದೆ. ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ವಶಪಡಿಸಿಕೊಂಡು, ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ಕ್ರಮವನ್ನುಜರುಗಿಸಿ, ಕರ್ನಾಟಕ ಅರಣ್ಯ ಕಾಯಿದೆ 1963

ಸೆಕ್ಷನ್ 33, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ವನಪಾಲಕರು ಅ.ಮೊ. ಸಂ:63/08-09ನ್ನು ದಾಖಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವಲಯಾರಣ್ಯಾಧಿಕಾರಿಗೆ ಒಪ್ಪಿಸಿರುತ್ತಾರೆ.

ನಂತರ ವಾಹನವನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿರುತ್ತದೆ.

ಈ ವಾಹನದ ಆರ್.ಸಿ. ಮಾಲಿಕರ ಬಗ್ಗೆ ತಿಳಿಯಲು ಈ ನ್ಯಾಯಾಲಯದಿಂದ ಸಂಖ್ಯೆ: ಬಿ3:ಅಮೊ:ವಾಹನ-29/08-09 ದಿ: 10-11-2008ರಂದು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ವಾಹನದ 'ಬಿ' ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರು ಪತ್ರ ಸಂಖ್ಯೆ:ಸಪ್ರಾಸಾಅ: ಸಾಗರ:ಆರ್‌ಜಿಎನ್:ಟಿಆರ್ 08-09 ದಿ:01-12-2008ರ ಪತ್ರದಲ್ಲಿ ಈ ವಾಹನದ 'ಬಿ' ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಸದರಿ 'ಬಿ' ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು ಶ್ರೀ ಪುಟ್ಟಪ್ಪ ಬಿನ್ ರಾಮಪ್ಪ, ನಂ:14/1, ಕಾಳೇಶ್ವರ, ಬಾಳೂರು, ಹೊಸನಗರ ತಾ. ಎಂದಿದ್ದು ಇವರಿಗೆ ದಿ:05-12-2008ರಂದು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ನೋಟಿಸನ್ನು ನೊಂದಣಿ ಅಂಚೆ ಮೂಲಕ ಜಾರಿ ಮಾಡಿರುತ್ತದೆ. ದಿ:16-12-2008ರಂದು ನೋಟಿಸನ್ನು ಆರ್.ಸಿ. ಮಾಲೀಕರು ಸ್ವೀಕರಿಸಿರುತ್ತಾರೆ.

ಆರ್.ಸಿ. ಮಾಲೀಕರು ತಮ್ಮ ಮನವಿಯನ್ನು ಅವರ ಜಿ.ಪಿ.ಎ.ದಾರರ ಮೂಲಕ ಈ ನ್ಯಾಯಾಲಯಕ್ಕೆ ದಿ:22-11-2008ರಂದು ಸಲ್ಲಿಸಿ, ವಾಹನ ಮಧ್ಯಂತರ ಅವಧಿಗೆ ಬಿಡುಗಡೆ ಮಾಡಲು ಕೋರಿರುತ್ತಾರೆ. ಇವರ ಕೋರಿಕೆ ಅರ್ಜಿಯನ್ನು ದಿ:16-05-2009ರಂದು ತಿರಸ್ಕರಿಸಿ ಈ ನ್ಯಾಯಾಲಯದಿಂದ ಆದೇಶವಾಗಿದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಜಿ.ಕೆ.ಸುದರ್ಶನ್, ವಲಯ ಅರಣ್ಯಾಧಿಕಾರಿ ಇವರನ್ನು ದಿ: 05-03-2011ರಂದು ನ್ಯಾಯಾಲಯಕ್ಕೆ ಕರೆಸಿ, ಸತ್ಯಪ್ರತಿಜ್ಞೆ ಬೋಧಿಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ನಾನು 2006 ರಿಂದ 2009 ರವರೆಗೆ ವಲಯ ಅರಣ್ಯಾಧಿಕಾರಿಯಾಗಿ ಅಂಬ್ಲಿಗೊಳ ವಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿ:02-11-2008 ರಂದು ಬಂದ ಖಚಿತ ವರ್ತಮಾನದ ಮೇರೆಗೆ ನಮ್ಮ ಸಿಬ್ಬಂದಿಗಳೊಂದಿಗೆ ನಮ್ಮ ಕಛೇರಿಯ ಎದುರಿನ ಗೇಟಿನ ಮುಂದೆ ಆನಂದಪುರಂ-ಶಿಕಾರಿಪುರ ರಸ್ತೆಯಲ್ಲಿ ಕಾಯುತ್ತಿದ್ದಾಗ ಸುಮಾರು ರಾ.9-00 ಗಂಟೆ ಸಮಯದಲ್ಲಿ ಒಂದು ವಾಹನ ಬರುತ್ತಿರುವುದನ್ನು ಟಾರ್ಚ್ ಬೆಳಕಿನ ಸಹಾಯದಿಂದ ಅದನ್ನು ನಿಲ್ಲಿಸಲು ಸೂಚಿಸಿದರೂ ನಿಲ್ಲಿಸದೇ ಮುಂದೆ ಹೋಗಿರುತ್ತದೆ. ನಾವು ಅದನ್ನು 400 ಮೀ. ದೂರ ಬೆನ್ನಟ್ಟಿ ಅಡ್ಡಹಾಕಿ ನಿಲ್ಲಿಸಿದೆವು. ಅದರಲ್ಲಿದ್ದ 3 ಜನ ಇಳಿದು ಓಡಲು ಪ್ರಯತ್ನಿಸಿದರು. ನಾವು ಮತ್ತು ಗ್ರಾಮಸ್ಥರು ಅವರನ್ನು ಬೆನ್ನಟ್ಟಿದೆವು. ಸದರಿ ವಾಹನದ ಚಾಲಕನನ್ನು ಸೋಮರಾಜ್, ಫಾರೆಸ್ಟರ್ ಗುರುತಿಸಿದ್ದು, ನಂತರ ವಾಹನವನ್ನು ಪರಿಶೀಲಿಸಲಾಗಿ ವಾಹನದಲ್ಲಿ 11 ಸಾಗುವಾನಿ ತುಂಡುಗಳಿದ್ದವು. ಮತ್ತು ವಾಹನದ ನೊಂದಣಿ ಸಂ:ಕೆಎ-15-5066 ಇದ್ದು, ಫೋರ್ಸ್ ಕಾರ್ಗೋಕಿಂಗ್ ಆಗಿತ್ತು.

ಸದರಿ ತುಂಡುಗಳ ಮೇಲೆ ಯಾವುದೇ ಛಾಪಾದ ಗುರುತಿರಲಿಲ್ಲ. ಆದ್ದರಿಂದ ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಅಳತೆ ಮಾಡಿ, ಕ್ರಮ ಸಂಖ್ಯೆ ಕೊಟ್ಟು, ಇಲಾಖಾ ಛಾಪಾ ಹೊಡೆದು, ಅವುಗಳನ್ನು ಮತ್ತು ವಾಹನವನ್ನು ಅಮಾನತ್ತುಪಡಿಸಿಕೊಂಡು ಮಹಜರ್ ಬರೆಯಲಾಯಿತು. ನಂತರ ಮುಂದಿನ ತನಿಖೆ ನಾನೇ ವಹಿಸಿಕೊಂಡು ವಿಚಾರಣಾ ವರದಿ ತಯಾರಿಸಿರುತ್ತೇನೆ. ವಿಚಾರಣಾ ಸಮಯದಲ್ಲಿ ವಾಹನದ ಮಾಲೀಕರಾದ ಪುಟ್ಟಪ್ಪ, ಇವರನ್ನು ತನ್ನ ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಿದ ಕಾರಣ 2ನೇ ಆರೋಪಿಯಾಗಿ ಸೇರಿಸಲಾಗಿದೆ. ನಂತರ ವಾಹನವನ್ನು ಅಧಿಕೃತ ಅಧಿಕಾರಿಯ ಅನುಮತಿಯೊಂದಿಗೆ ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರಕ್ಕೆ ಸಾಗಿಸಿದೆವು. ತುಂಡುಗಳನ್ನು ಶಿಕಾರಿಪುರ ನಾಟಾ ಸಂಗ್ರಹಾಲಯಕ್ಕೆ ಸಾಗಿಸಲಾಯಿತು. ಆ ದಿನ ಮಾಡಿದ ಮಹಜರ್ ಈಗ ನೋಡುತ್ತಿದ್ದು. ಅದನ್ನು ನಿಪಿ-1 ಎಂದು, ಅದರಲ್ಲಿನ ನನ್ನ ಸಹಿಯನ್ನು ನಿಪಿ-1ಎ ಎಂದು, ವಿಚಾರಣಾ ವರದಿಯನ್ನು ನಿಪಿ-2 ಎಂದು, ಅದರಲ್ಲಿನ ನನ್ನ ಸಹಿಯನ್ನು ನಿಪಿ-2ಎ ಎಂದು ಗುರುತಿಸಲಾಯಿತು. ಅಂದು ವಾಹನದ ಡ್ಯಾಸ್ ಬೋರ್ಡ್‌ನಲ್ಲಿ ಚಾಲನಾ ಪರವಾನಿಗೆ ನಿಪಿ-3 ಎಂದು ಗುರುತಿಸಲಾಯಿತು. ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಿದ್ದರಿಂದ ಅದನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಬೇಕಾಗಿ ಕೋರಿಕೊಳ್ಳುತ್ತೇನೆ".

ಸಾಕ್ಷಿಯನ್ನು ದಿ:17-09-2011 ರಂದು ಪುನ: ಕರೆಸಿ ಸತ್ಯಪ್ರತಿಜ್ಞೆ ಬೋಧಿಸಲಾಯಿತು. ಪಾಟಿಸವಾಲ್ ಟಿ.ಬಿ.ಎಂ. ವಕೀಲರಿಂದ "ಈ ಪ್ರಕರಣದಲ್ಲಿ ನಾನು ತನಿಖಾಧಿಕಾರಿಯಾಗಿದ್ದು, ನನಗೆ ವರ್ಗಾವಣೆಯಾಗಿದ್ದರಿಂದ ದೋಷಾರೋಪಣಾ ಪಟ್ಟಿ ಸಲ್ಲಿಸಿರುವುದಿಲ್ಲ. ತನಿಖೆ ಕಾಲದಲ್ಲಿ ಆರೋಪಿಯ ಮನೆಯ ಹಿತ್ತಲನಲ್ಲಿದ್ದ ಮರದ ಬುಡದ ಬಗ್ಗೆ ಮಹಜರ್ ಮಾಡಲು ನಾನು ಹೋಗಿಲ್ಲ. ತನಿಖೆ ಕಾಲದಲ್ಲಿ ವಾಹನದ ಮಾಲೀಕ ಪುಟ್ಟಪ್ಪ 80 ವರ್ಷದ ವಯಸ್ಸಾಗಿದ್ದು, ನನಗೆ ಗೊತ್ತಿಲ್ಲ. ಯಾವ ಸರ್ವೆ ನಂಬರ್‌ನಿಂದ ಸದರಿ ತುಂಡುಗಳನ್ನು ತಂದಿದ್ದಾರೆನ್ನವುದು ನನಗೆ ಗೊತ್ತಿಲ್ಲ. ಮನುಬಾಬು ಒಂದು ವಾರದಿಂದ ಸದರಿ ವಾಹನಕ್ಕೆ ಹಂಗಾಮಿ ಚಾಲಕನಾಗಿದ್ದನೆನ್ನುವುದು ನನಗೆ ಗೊತ್ತಿಲ್ಲ. ದೋಷಾರೋಪಣಾ ಪಟ್ಟಿ ಯಾರ್ಯಾರ ಮೇಲೆ

ಹಾಕಿರುತ್ತಾರೆನ್ನುವುದು ನನಗೆ ಗೊತ್ತಿಲ್ಲ. ಪುಟ್ಟಪ್ಪ ಯಾರು ಮತ್ತು ಎಲ್ಲಿರುತ್ತಾರೆ ಎನ್ನುವ ಬಗ್ಗೆ ನಾನು ತನಿಖೆ ಮಾಡಿರುವುದಿಲ್ಲ. ನನ್ನ ತನಿಖೆ ಕಾಲದಲ್ಲಿ ಈ ವಾಹನದ ಮೇಲೆ ಈ ಹಿಂದೆ ಯಾವುದೇ ಬೇರೆ ಕೇಸು ದಾಖಲಾಗಿರುವುದು ನನಗೆ ತಿಳಿಸಿಲ್ಲ".

ಡಿಫೆನ್ಸ್‌ಸಾಕ್ಷಿ ಶ್ರೀ ಹುಚ್ಚಪ್ಪ ಬಿನ್ ಪುಟ್ಟಪ್ಪ, ಇವರನ್ನು ದಿ:28-05-2011ರಂದು ನ್ಯಾಯಾಲಯಕ್ಕೆ ಕರೆಸಿ, ಸತ್ಯಪ್ರತಿಜ್ಞೆ ಬೋಧಿಸಿ ವಿಚಾರಣೆ ಟಿ.ಬಿ.ಎಂ. ವಕೀಲರು "ಅರ್ಜಿದಾರರಾದ ಪುಟ್ಟಪ್ಪನವರು ನನ್ನ ತಂದೆ. ಅವರಿಗೆ 85 ವರ್ಷ ವಯಸ್ಸಾಗಿರುತ್ತದೆ. ಜಪ್ತಾದ ವಾಹನ ನನ್ನ ತಂದೆ ಖಾತೆಯಲ್ಲಿದ್ದು ನನ್ನ ಹೆಸರಿಗ ವರ್ಗಾವಣೆಯಾಗಿದೆ. ನನ್ನ ತಂದೆ ನನ್ನ ಹೆಸರಿಗೆ ಅಧಿಕಾರ ಪತ್ರ ಕೊಟ್ಟಿದ್ದು ಅದನ್ನು ಹಾಜರುಪಡಿಸಿರುತ್ತೇನೆ. ನಾನು ಮತ್ತು ನನ್ನ ತಂದೆ ಎಲ್ಲರೂ ಒಟ್ಟಿಗೆ ವಾಸಿಸುತ್ತಿದ್ದೇವೆ. ಈ ವಾಹನವನ್ನು ಬಾಡಿಗೆ ಓಡಿಸಿ ನಮ್ಮ ಜೀವನ ಸಾಗಿಸುತ್ತಿದ್ದೆವು. ಬೇರೆ-ಬೇರೆ ಡ್ರೈವರ್‌ಗಳನ್ನು ನೇಮಿಸಿಕೊಂಡು ವಾಹನವನ್ನು ಓಡಿಸುತ್ತಿದ್ದೆವು. ಘಟನೆ ಸಮಯದಲ್ಲಿ ಮನುಬಾಬು ಎಂಬ ಚಾಲಕ ಎಂಬುವವನು ಸದರಿ ವಾಹನವನ್ನು ಚಾಲನೆ ಮಾಡುತ್ತಿದ್ದನು. ದಿ:26-10-2008ರಿಂದ ಅವನು ಹಂಗಾಮಿ ಚಾಲಕನಾಗಿ ನೇಮಿಸಿಕೊಂಡಿದ್ದನು. ಆ ಸಮಯದಲ್ಲಿ ಶುಂಠಿ ಸಾಗಿಸಲು ಬಾಡಿಗೆಗೆ ಒಂದು ವಾರದಿಂದ ಕಳುಹಿಸಲಾಗಿತ್ತು. ಚಾಲಕನ ಮನೆ ನಮ್ಮ ಮನೆಯಿಂದ 2 ಕಿ.ಮೀ. ದೂರವಿರುವ ಹಾಲುಗುಡ್ಡೆಯಾಗಿರುತ್ತದೆ. ಚಾಲಕ ಕೇರಳದವನಾಗಿರುತ್ತಾನೆ. ನಮ್ಮ ಸಂಬಂಧಿಕನಲ್ಲ. ಶುಂಠಿ ಸಾಗಿಸಲು ಬೆಳಿಗ್ಗೆ ಬೇಗ ಹೋಗಬೇಕಾದುದರಿಂದ ತನ್ನ ಮನೆ ಬಳಿ ಚಾಲಕ ನಿಲ್ಲಿಸಿಕೊಳ್ಳುತ್ತಿದ್ದನು. ದಿ:02-11-2008ರಂದು ರಾ. 7 ಗಂಟೆಗೆ ಶುಂಠಿಯನ್ನು ಇಳಿಸಿ ಚಾಲಕನು ವಾಹನವನ್ನು ತನ್ನ ಮನೆ ಬಳಿ ತೆಗೆದುಕೊಂಡು ಹೋಗಿರುತ್ತಾನೆ. ಬೆಳಿಗ್ಗೆ 5-00 ಗಂಟೆಗೆ ಲೋಡಿಗೆ ಹೋಗಬೇಕಾದ್ದರಿಂದ ವಾಹನವನ್ನು ತನ್ನ ಮನೆ ಹತ್ತಿರ ತೆಗೆದುಕೊಂಡು ಹೋಗಿರುತ್ತಾನೆ. ಮಾರನೇ ದಿನ ಬೆಳಿಗ್ಗೆ 8-00 ಗಂಟೆಗೆ ಚಾಲಕ ಫೋನ್ ಮಾಡಿ ಮನೆ ಮುಂದೆ ನಿಲ್ಲಿಸಿದ ವಾಹನ ಇಲ್ಲವೆಂದು ತಿಳಿಸಿದನು. ನಾವು ಗಾಡಿ ಹುಡುಕಿದೆವು. ನಂತರ ರಿಪ್ಪನ್‌ಪೇಟೆ ಠಾಣೆಗೆ ಹೋಗಿ ಕೇಸನ್ನು ದಾಖಲು ಮಾಡಲು ಕೇಳಿದೆವು ಅವರು ವಾಹನವನ್ನು ಅರಣ್ಯ ಇಲಾಖೆಯವರು ಜಫ್ತು ಮಾಡಿರುವ ಕಾರಣ ದೂರು ತೆಗೆದುಕೊಳ್ಳಲಿಲ್ಲ. ನಂತರ ವೃತ್ತ ನಿರೀಕ್ಷಕರಿಗೆ ಸಿಪಿಐ ಮೂಲಕ ಮತ್ತು ಆರಕ್ಷಕ ಅಧೀಕ್ಷಕರು ಮತ್ತು ಸಬ್‌ಇನ್ಸ್‌ಪೆಕ್ಟರವರಿಗೆ ದೂರನ್ನು ರಿಜಿಸ್ಟರ್ ಅಂಚೆ ಮೂಲಕ ಕಳುಹಿಸಿದೆವು. ನಂತರ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರಲ್ಲಿ ಅರ್ಜಿ ಸಲ್ಲಿಸಿದೆವು. ನಂತರ ವಿಚಾರ ತಿಳಿಯಲಾಗಿ ಚಾಲಕ ತನ್ನ ಮನೆ ಹಿತ್ತಲಿನಿಂದ ಸಾಗುವಾನಿ ಮರ ಕಡಿದು ದೊಡ್ಡಪ್ಪನ ಮನೆಗೆ ಸಾಗಿಸುತ್ತಿದ್ದ ಎಂದು ತಿಳಿಯಿತು. ಆತನ ವಿರುದ್ಧ ಈ ಬಗ್ಗೆ ಕ್ರಿಮಿನಲ್ ಮೊಕದ್ದಮೆ ದಾಖಲಾಗಿದೆ.

ನಮ್ಮ ಮತ್ತು ನಮ್ಮ ವಾಹನದ ವಿರುದ್ಧ ಇದಕ್ಕೂ ಪೂರ್ವದಲ್ಲಿ ಯಾವುದೇ ಕ್ರಿಮಿನಲ್ ಪ್ರಕರಣ ದಾಖಲಾಗಿಲ್ಲ ಮತ್ತು ಯಾವುದೇ ಅಕ್ರಮ ಚಟುವಟಿಕೆಗೆ ವಾಹನ ಬಳಸಿಲ್ಲ. ಈ ಅಕ್ರಮ ಸಾಗಾಣಿಕೆಯಲ್ಲಿ ನನ್ನ ಮತ್ತು ನನ್ನ ತಂದೆಯ ಯಾವುದೇ ಪಾತ್ರವಿರುವುದಿಲ್ಲ. ಸದರಿ ವಾಹನದಿಂದ ನಮ್ಮ ಜೀವನ ನಡೆಸುತ್ತಿದ್ದ, ಕಾರಣ ಸದರಿ ವಾಹನವನ್ನು ನಮಗೆ ಬಿಟ್ಟುಕೊಡಬೇಕಾಗಿ ಕೇಳಿಕೊಳ್ಳುತ್ತಿದ್ದೇನೆ.

ಈ ಬಗ್ಗೆ ಅಧಿಕಾರ ಪತ್ರದ ಜೆರಾಕ್ಸ್ ಪ್ರತಿಯನ್ನು ಹಾಜರುಪಡಿಸಿರುತ್ತೇನೆ. ವೃತ್ತ ನಿರೀಕ್ಷಕರಿಗೆ ಸಿಪಿಐ ಮೂಲಕ ಮತ್ತು ಆರಕ್ಷಕ ಅಧೀಕ್ಷಕರು ಮತ್ತು ಸಬ್‌ಇನ್ಸ್‌ಪೆಕ್ಟರವರಿಗೆ ದೂರನ್ನು ರಿಜಿಸ್ಟರ್ ಪತ್ರದ ಮೂಲಕ ಕಳುಹಿಸಿದ ಬಗ್ಗೆ ಪತ್ರದ ಜೆರಾಕ್ಸ್ ಪ್ರತಿ ಲಗತ್ತಿಸಿರುತ್ತೇನೆ. ದಾಖಲೆಗಳನ್ನು ಹಾಜರುಪಡಿಸಲು ಸಮಯಾವಕಾಶ ಕೋರಿದ್ದು ಸಮಯ ನೀಡಲಾಯಿತು".

ಸಾಕ್ಷಿಯನ್ನು ದಿ:29-07-2011ರಂದು ಕರೆಸಿ ಸತ್ಯಪ್ರತಿಜ್ಞೆ ಬೋಧಿಸಿ, ಮುಖ್ಯ ವಿಚಾರಣೆ ಟಿ.ಬಿ.ಎಂ. ವಕೀಲರಿಂದ ನಮ್ಮ ತಂದೆ ನನಗೆ ನೀಡಿದ ವಿಶೇಷ ಅಧಿಕಾರ ಪತ್ರ ಈಗ ನೋಡುತ್ತಿದ್ದು, ಅದನ್ನು ನಿಡಿ-1 ಎಂದು ಗುರುತಿಸಿದೆ. ದಿ:03-11-2008ರಂದು ದೂರನ್ನು ಸಿ.ಪಿ.ಐ.ರವರಿಗೆ ಸಿ.ಪಿ.ಒ. ಮೂಲಕ ಮತ್ತು ಸಬ್‌ಇನ್ಸ್‌ಪೆಕ್ಟರ್ ಮತ್ತು ಸೂಪರಿಂಟೆಂಡೆಂಟ್ ಇವರಿಗೆ ಅಂಚೆ ನೊಂದಣಿ ಮರುಪಾವತಿಯೊಂದಿಗೆ ಸಲ್ಲಿಸಿದ್ದು ದೂರಿನ ಪ್ರತಿಯನ್ನು ಹಾಜರುಪಡಿಸಿದ್ದು, ಅದನ್ನು ನಿಡಿ-2 ಎಂದು ಗುರುತಿಸಲಾಯ್ತು. ಸಿಪಿಐ ರಶೀದಿ ನಿಡಿ-2ಎ ಎಂದು, ಅಂಚೆ ಮರುಪಾವತಿಗಳನ್ನು ನಿಡಿ-2ಬಿ ಮತ್ತು ಸಿ ಎಂದು ಗುರುತಿಸಲಾಯ್ತು. ಆದ್ದರಿಂದ ವಾಹನವನ್ನು ನನಗೆ ಬಿಟ್ಟುಕೊಡಬೇಕಾಗಿ ಕೇಳಿಕೊಳ್ಳುತ್ತೇನೆ.

ಪಾಟಿಸವಾಲು ಸಹಾಯಕ ಸರ್ಕಾರಿ ಅಭಿಯೋಜಕರಿಂದ "ಈ ಘಟನೆ ನಡೆದ ದಿನದಿಂದ ಚಾಲಕ ಮನುಬಾಬು ನನ್ನ ಕೈಗೆ ಸಿಕ್ಕಿಲ್ಲ. ಆ ದಿನ ನಾನು ವಾಹನ ಹುಡುಕುವಾಗ ಮನುಬಾಬು ಇರಲಿಲ್ಲ. ಶುಂಠಿ ಬಾಡಿಗೆ ವ್ಯವಹಾರವನ್ನು ಮನುಬಾಬುವೇ ಮಾಡುತ್ತಿದ್ದ ದುಡ್ಡನ್ನು ಮಾತ್ರ ತಂದು ಕೊಡುತ್ತಿದ್ದ, ಯಾರ ಬಾಡಿಗೆ ಹೊಡೆಯುತ್ತಿದ್ದ ಎಂದು ನನಗೆ ತಿಳಿಯುತ್ತಿರಲಿಲ್ಲ. ನಮ್ಮ ಮನೆಯ ಮುಂದೆ ದಿ:27, 28-10-2008 ರಂದು ಮಾತ್ರ ನಿಲ್ಲಿಸಿದ್ದು ನಂತರ ಈ ಪ್ರಕರಣ ನಡೆಯುವವರೆಗೂ ಆತನ ಮನೆಯ ಮುಂದೆ ವಾಹನವನ್ನು ನಿಲ್ಲಿಸುತ್ತಿದ್ದ. ನಮ್ಮ ಮನೆ ಮುಂದೆ ರಸ್ತೆ ಸರಿ ಇಲ್ಲದ ಕಾರಣ ಆತನ ಮನೆಯ ಮುಂದೆ ವಾಹನ ನಿಲ್ಲಿಸಿಕೊಳ್ಳಲು ತಿಳಿಸಿದ್ದೆ. ನಾನು ದಿ:03-11-08ರಂದು ಬೆಳಿಗ್ಗೆ 8-30ಕ್ಕೆ ರಿಪ್ಪನ್‌ಪೇಟೆ ಠಾಣೆಗೆ ಹೋದಾಗ ನನ್ನ ವಾಹನವನ್ನು ಅರಣ್ಯ ಇಲಾಖೆಯವರು ಜಫ್ತು ಮಾಡಿದ ವಿಷಯ ತಿಳಿಯಿತು. ಆ ಬಗ್ಗೆ ನಾನು ಅರಣ್ಯ ಇಲಾಖೆಯವರನ್ನು ವಿಚಾರಿಸಲಾಗಿ ತುಂಡುಗಳು ವಾಹನದಲ್ಲಿದ್ದ ಕಾರಣ ವಾಹನ ಜಫ್ತು ಮಾಡಿದ ವಿಷಯ ತಿಳಿಸಿದರು. ಆ ಸಮಯದಲ್ಲಿ ಚಾಲಕ ಮನುಬಾಬು ಗಾಡಿ ಬಿಟ್ಟು ಓಡಿ ಹೋದನೆಂದು ತಿಳಿಸಿದರು. ದಿ: 02-11-08ರ ರಾತ್ರಿ 9-00ರ ಸಮಯಕ್ಕೆ ಅಂಬ್ಲಿಗೋಳ ಗ್ರಾಮದ ದುರ್ಗಾಂಬ ದೇವಸ್ಥಾನದ ಬಳಿ

ಮನುಬಾಬು ಸಾಗುವಾನಿ ತುಂಡುಗಳನ್ನು ಸಾಗಿಸುತ್ತಿದ್ದಾಗ ಅರಣ್ಯಾಧಿಕಾರಿಗಳು ಹಿಡಿದರು ಎಂದರೆ ನನಗೆ ಗೊತ್ತಿಲ್ಲ. ನನ್ನ ವಾಹನವನ್ನು ಮನುಬಾಬು ತುಂಡು ಸಾಗಿಸುವಾಗ ಅರಣ್ಯಾಧಿಕಾರಿಗಳು ಹಿಡಿದಿದ್ದು ತಿಳಿದಿದ್ದರೂ ವಾಹನ ಕಳುವಾಗಿದೆ ಎಂದು ಸುಳ್ಳು ದೂರನ್ನು ಅಂಚೆ ಮೂಲಕ ಕಳುಹಿಸಿದ್ದೇನೆಂದರೆ ಸರಿಯಲ್ಲ. ಅರಣ್ಯಾಧಿಕಾರಿಗಳು ದಾಖಲಿಸಿದ ಪ್ರಥಮ ವರ್ತಮಾನ ವರದಿಯಲ್ಲಿ ಮನುಬಾಬುವನ್ನು ಒಂದನೇ ಆರೋಪಿಯನ್ನಾಗಿಸಿದ್ದಾರೆ ಎಂದರೆ ಸರಿ. ವಲಯ ಅರಣ್ಯಾಧಿಕಾರಿಗಳು ನಮ್ಮ ತಂದೆ ವಾಹನವನ್ನು ಮನುಬಾಬುವಿನ ಮೂಲಕ ಅಕ್ರಮ ಸಾಗಾಣಿಕೆಗೆ ಬಳಸಿದ ಬಗ್ಗೆ ದೋಷಾರೋಪಣೆ ಪಟ್ಟಿಯಲ್ಲಿ ಸೇರಿಸಿದ್ದಾರೆ ಎಂದರೆ ಸರಿಯಲ್ಲ. ನಮ್ಮ ಚಾಲಕ ಮನುಬಾಬು ಅಕ್ರಮ ಸಾಗಾಣಿಕೆಗೆ ವಾಹನ ಬಳಸಿದ್ದು ನನಗೆ ಗೊತ್ತು ಎಂದರೆ ಸರಿಯಲ್ಲ".

**ಡಿಫೆನ್ಸ್ ವಕೀಲರು ದಿ:29–10–2011 ರಂದು ಈ ಕೆಳಗಿನಂತೆ ವಾದ ಮಂಡಿಸಿರುತ್ತಾರೆ.**

(1) ವಾಹನದ ಆರ್.ಸಿ. ಮಾಲೀಕರಿಗೆ 80 ವರ್ಷವಾಗಿರುತ್ತದೆಂದು.

(2) ದಿ:26–08–2010 ರಂದು ವಾಹನ ಚಾಲಕನನ್ನು ನೇಮಿಸಿರುತ್ತಾರೆಂದು.

(3) ವಾಹನದಲ್ಲಿದ ಅರಣ್ಯ ಉತ್ಪನ್ನವು ವಾಹನ ಚಾಲಕನ ಜಮೀನಿನಿಂದ ತಂದಿದೆಂದು.

(4) ವಾಹನದಲ್ಲಿದ ಅರಣ್ಯ ಉತ್ಪನ್ನವು ಸರ್ಕಾರಕ್ಕೆ ಸೇರುವುದಿಲ್ಲವೆಂದು. ಆದ್ದರಿಂದ ಈ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಬರುವುದಿಲ್ಲವೆಂದು,

(5) ವಾಹನ ಮಾಲೀಕರು ಪ್ರಕರಣದಲ್ಲಿ ಭಾಗಿಯಾಗಿಲ್ಲದ ಕಾರಣ ವಾಹನ ಮುಟ್ಟುಗೋಲು ಹಾಕಿಕೊಳ್ಳಲು ಬರುವುದಿಲ್ಲವೆಂದು, ಈ ಬಗ್ಗೆ ಮಾನ್ಯ ಹೈಕೋರ್ಟ್ ಬಾಂಬೆಯ ಆದೇಶ ಸಂ: Cr.WP.No.1309/1991 Dt:12-10-1998 (1999 CRI.L.J.553) ರಲ್ಲಿ ಉಲ್ಲೇಖಿಸಿರುತ್ತಾರೆ ಎಂದು ದಾಖಲೆ ಸಲ್ಲಿಸಿರುತ್ತಾರೆ.

(6) ಈ ವಾಹನ ಕಳ್ಳತನವಾದ ಬಗ್ಗೆ ಪೊಲೀಸ್ ಠಾಣೆಯಲ್ಲಿ ದೂರು ನೀಡಿದೆಂದು.

**ಸರ್ಕಾರಿ ಅಭಿಯೋಜಕರು ದಿ:19–11–2011 ರಂದು ವಾದ ಮಂಡಿಸಿರುತ್ತಾರೆ.**

(1) ಭಾಧ್ಯತೆದಾರರು ವಾಹನದಲ್ಲಿ ಅಕ್ರಮ ಸಾಗಾಣಿಕೆಗೆ ಬಳಸದೇ ಇರುವ ಬಗ್ಗೆ ಯವುದೇ ದಾಖಲೆಗಳನ್ನು ನೀಡದೆ, ಜಪ್ತಾದ ಅರಣ್ಯ ಉತ್ಪನ್ನವು ಸರ್ಕಾರಿ ಜಾಗದಿಂದ ತಂದಿರುವುದಲ್ಲವೆಂದು ಮಾತ್ರ ಹೇಳಿರುತ್ತಾರೆ. ಆದರೆ, ಹಿಡುವಳಿ ಜಾಗದಿಂದ ಈ ಅರಣ್ಯ ಉತ್ಪನ್ನ ತಂದ ಬಗ್ಗೆ ಯಾವುದೇ ದಾಖಲೆಗಳನ್ನು ಒದಗಿಸಿರುವುದಿಲ್ಲವೆಂದು.

(2) ಈ ವಾಹನ ಕಳ್ಳತನವಾದ ಬಗ್ಗೆ ಪೊಲೀಸ್ ಠಾಣೆಗೆ ದೂರು ನೀಡಿರುವ ಬಗ್ಗೆ ಹೇಳಿರುತ್ತಾರೆ. ಆದರೆ, ಆರೋಪಿ ಮನುಬಾಬು ಚಾಲಕನನ್ನು ವಿಚಾರಣೆ ನಡೆಸಿ ಹೇಳಿಕೆ ಪಡೆದಿರುವುದಿಲ್ಲ.

(3) ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ (80)ರ ಪ್ರಕಾರ ವಾಹನದಲ್ಲಿ ಜಪ್ತಾದ ಅರಣ್ಯ ಉತ್ಪನ್ನದ ಬಗ್ಗೆ ಯಾರು ಕ್ಲೇಮು ಅರ್ಜಿ ಸಲ್ಲಿಸದಿದ್ದರೆ ಅದು ಸರ್ಕಾರಕ್ಕೆ ಸೇರುತ್ತದೆಂದು.

(4) ಬಾಧ್ಯತೆದಾರರ ವಕೀಲರು ನ್ಯಾಯಾಲಯಕ್ಕೆ ಸಲ್ಲಿಸಿರುವ Cr.WP.No.1309/1991 Dt:12-10-1998 (1999 CRI.L.J.553) ರ ಮಹಾರಾಷ್ಟ್ರ ಉಚ್ಚ ನ್ಯಾಯಾಲಯದ ಆದೇಶವು ಈ ಪ್ರಕರಣಕ್ಕೆ ಅನ್ವಯಿಸುವುದಿಲ್ಲವೆಂದು.

(5) ವಾಹನವು ಈ ಪ್ರಕರಣದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಿರುವುದು ಸಾಭೀತಾಗಿರುವುದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.**

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಟೆಂಪೋಟ್ರ್ಯಾಕ್ಸ್ ನಂ:ಕೆಎ–15–5066ರಲ್ಲಿ ಅರಣ್ಯ ಉತ್ಪನ್ನವಾದ 07 ಸಾಗುವಾನಿ ನಾಟಾ 11=0.969 ಎಂ3ನ್ನು ದಿ:02–11–2008ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಟೆಂಪೋಟ್ರ್ಯಾಕ್ಸ್‌ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಸಾಗುವಾನಿ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:02–11–2008 ರಂದು ಅಂಬ್ಲಿಗೊಳ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ. ಅಂಜನಾಪುರ ಹೋಬಳಿ ಅಂಬ್ಲಿಗೊಳ ಗ್ರಾಮದ ಶ್ರೀ ದುರ್ಗಂಬಾ ದೇವಸ್ಥಾನದ ಬಳಿ ಇರುವ ರಸ್ತೆಯಲ್ಲಿ ರಾತ್ರಿ ಕಾಯುತ್ತಿರುವಾಗ ಸುಮಾರು 9–00 ಗಂಟೆ ಸಮಯದಲ್ಲಿ ಒಂದು ಬಿಳಿಬಣ್ಣದ ಟೆಂಪೋಟ್ರ್ಯಾಕ್ಸ್ ಕೆಎ–15–5066ರಲ್ಲಿ 11 ಸಾಗುವಾನಿ ನಾಟಾ ಒಟ್ಟು 0.969 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಮತ್ತು ಸಿಬ್ಬಂದಿಗಳು ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಹಾಗೂ ಸಾಗುವಾನಿ ನಾಟಾಗಳನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಸಾಗುವಾನಿ ನಾಟಾವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಪುಟ್ಟಪ್ಪ ಬಿನ್ ರಾಮಪ್ಪ, ಸುಮಾರು 80 ವರ್ಷ, ಕಾಳೇಶ್ವರ ವಾಸಿ, ಹೊಸನಗರ ತಾ. ಇವರು ದಿ:22–11–2008 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:16–12–2008ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಹಾಗೂ ಸ್ವೀಕೃತಿ ಈ ನ್ಯಾಯಾಲಯಕ್ಕೆ ಬಂದಿರುತ್ತದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆದಿದೆ. ಮತ್ತು ಡಿಫೆನ್ಸ್ ಕಡೆಯವರು ವಾದ ಮಂಡಿಸಿರುತ್ತಾರೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:02–11–2008ರಂದು ಟೆಂಪೋಟ್ರ್ಯಾಕ್ಸ್ ಕೆಎ–15–5066 ರಲ್ಲಿ 11 ಸಾಗುವಾನಿ ನಾಟಾ ಒಟ್ಟು ಅಳತೆ 0.969 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಅಂಬ್ಲಿಗೊಳ ವಲಯದ ವಲಯ ಅರಣ್ಯಾಧಿಕಾರಿ ಪತ್ತೆಹಚ್ಚಿ ಕೇಸು ದಾಖಲಿಸಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿ ಮತ್ತು ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಪ್ರಾಸಿಕ್ಯೂಷನ್‌ರವರು ಸಲ್ಲಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಡಿಫೆನ್ಸ್ ಕಡೆಯವರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಲ್ಲಿ (1) ಈ ವಾಹನಕ್ಕೆ ಚಾಲಕನನ್ನು ದಿ:26–10–2008 ರಂದು ನೇಮಿಸಿರುತ್ತಾರೆ. ಅಂದರೆ, ಘಟನೆ ನೆಡೆಯುವ 07 ದಿನಗಳ ಮುಂಚಿತ ಚಾಲಕನನ್ನು ನೇಮಿಸಿರುತ್ತಾರೆ. (2) ಈ ವಾಹನದ ಎಲ್ಲಾ ಬಾಡಿಗೆ ನಿರ್ಧರಿಸುವುದು ಹಾಗೂ ವಸೂಲಿ ಮಾಡುವ ಕೆಲಸವನ್ನು ಈ ವಾಹನದ ಚಾಲಕನೇ ನಿರ್ವಹಿಸುತ್ತಿದ್ದನೆಂದು ಹೇಳಿರುತ್ತಾರೆ. ಆದರೆ, ವಾಹನ ಚಾಲಕನನ್ನು ಯಾರೆಂದು ಗೊತ್ತಿಲ್ಲದಿದ್ದರು ಇಷ್ಟು ಬೆಲೆಬಾಳುವ ವಾಹನವನ್ನು ಮತ್ತು ಸಂಪೂರ್ಣ ಬಾಡಿಗೆ ಜವಾಬ್ದಾರಿಯನ್ನು ಒಂದು ವಾರದ ಹಿಂದೆ ನೇಮಿಸಿದ ಕೇರಳ ರಾಜ್ಯದ ಚಾಲಕನಿಗೆ ವಹಿಸಿರುತ್ತಾರೆ ಎಂದರೆ ನ್ಯಾಯಾಲಯಕ್ಕೆ ಅನುಮಾನ ಉಂಟಾಗಿರುತ್ತದೆ. ಮತ್ತು ಈ ವಾಹನವನ್ನು ಚಾಲಕನ್ನು ತನ್ನ ಮನೆಯ ಹಿತ್ತಲನಿಂದ ಸಾಗುವಾನಿ ನಾಟಾವನ್ನು ತೆಗೆದುಕೊಂಡು ಹೋಗಿರುತ್ತಾನೆ ಎಂದು ವಾಹನ ಮಾಲೀಕರು ಹೇಳಿಕೆಯಲ್ಲಿ ಹೇಳಿರುತ್ತಾರೆ. ಆದರೆ, ಈ ನಾಟಾ ಸ್ವಂತ ಜಾಗದಿಂದ ತಂದಿರುವುದಕ್ಕೆ ವಾಹನ ಮಾಲೀಕರು ವಿಚಾರಣಾ ಸಮಯದಲ್ಲಿ ಯಾವುದೇ ಸಾಕ್ಷ್ಯಾಧಾರಗಳನ್ನು ನ್ಯಾಯಾಲಯಕ್ಕೆ

ಹಾಜರ್ಪಡಿಸಿರುವುದಿಲ್ಲ. ಇದರಿಂದ ಈ ನಾಟಾ ಸ್ವಂತ ಜಾಗದಿಂದ ತಂದ ಬಗ್ಗೆ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ. ಇದರಿಂದ ಈ ಪ್ರಕರಣದಲ್ಲಿ ಜಪ್ತಾದ ಸಾಗುವಾನಿ ನಾಟಾವು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 80ರ ಪ್ರಕಾರ ಸರ್ಕಾರದ ಸ್ವತ್ತು ಎಂದು ಪರಿಗಣಿಸಲಾಯಿತು.

ಅಲ್ಲದೇ, ವಾಹನ ಮಾಲೀಕರು ಈ ವಾಹನವನ್ನು ಮಧ್ಯಂತರ ಅವಧಿಗೆ ಬಿಡುಗಡೆಗೆ ಕೋರಿದ ಅರ್ಜಿಯನ್ನು ದಿ:16–05–2009 ರಂದು ಈ ನ್ಯಾಯಾಲಯದಿಂದ ತಿರಸ್ಕರಿಸಿ ಆದೇಶ ಹೊರಡಿಸಿದೆ. ಈ ಆದೇಶದ ಮೇಲೆ ವಾಹನ ಮಾಲೀಕರು ಮಾನ್ಯ ಶೀಘ್ರ ವಿಲೇವಾರಿ ನ್ಯಾಯಾಲಯ, ಸಾಗರ ಇಲ್ಲಿ ಕ್ರಿ.ಮಿ.ಅ. ನಂ:12/2009ರಲ್ಲಿ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಸದರಿ ಅಫೀಲ್‌ನ ದಿ:11–06–2010ರ ಆದೇಶದಲ್ಲಿ ಮಹಾರಾಷ್ಟ್ರ ರಾಜ್ಯದ ಬಾಂಬೆ ಹೈಕೋರ್ಟ್‌ನ ಆದೇಶವು (Cr.WP.No.1309/1991 Dt:12–10–1998 (1999 CRI.L.J.553) ಈ ಪ್ರಕರಣಕ್ಕೆ ಅನ್ವಯಿಸುವುದಿಲ್ಲವೆಂದು ಉಲ್ಲೇಖಿಸಿರುತ್ತದೆ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥಾವ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚೆರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. …………………………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಇದರಿಂದ ಈ ಮೇಲಿನ ಅಂಶಗಳಿಂದ ಈ ವಾಹನದಲ್ಲಿ ಕಳ್ಳ ಸಾಗಾಣಿಕೆ ಮಾಡದಂತೆ ಯಾವುದೇ ಮುನ್ನಚ್ಚೆರಿಕೆ ಕ್ರಮ ತೆಗೆದುಕೊಂಡ ಬಗ್ಗೆಯಾಗಲೀ, ಅರ್ಜಿದಾರರು ಮುಗ್ದರೆನ್ನುವುದ ಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ಟೆಂಪೋಟ್ರ್ಯಾಕ್ಸ್ ಕೆಎ–15–5066 (ಇಂಜಿನ್ ನಂ:D-27024158 ಛಾಸ್ಸಿಸ್ ನಂಬರ್:57056345) ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಸಾಗುವಾನಿ 11=0.969 ಎಂ3 ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ: 24–03–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಅಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ**
**ಸಾಗರ ವಿಭಾಗ, ಸಾಗರ.**

**ಪಿ.ಆರ್. ನಂ. 559**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

ವಿಷಯ : **ಹನಮಂತಗೌಡ ರುದ್ರಗೌಡ ಕಲ್ಮನಿ,** ರವರು **ಗದಗ ಜಿಲ್ಲೆ, ಗದಗ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ಗದಗ ತಾಲ್ಲೂಕು ಪಂಚಾಯತಿ, 1–ಬಳಗಾನೂರ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

ಉಲ್ಲೇಖ : 1) ಜಿಲ್ಲಾಧಿಕಾರಿಗಳು, **ಗದಗ** ಜಿಲ್ಲೆ ರವರ ಪತ್ರದ ಸಂಖ್ಯೆ: **ಜಿಪಂ.ತಾಪಂ.ಚುನಾವಣೆ.ವಹಿ.35/2010–11** ದಿನಾಂಕ: 05**–03–2011**

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/76/ಟಿಜಡ್‌ಪಿ/2011, ದಿನಾಂಕ: **12–07–2011**

3) ಜಿಲ್ಲಾಧಿಕಾರಿಗಳು, **ಗದಗ** ಜಿಲ್ಲೆ, ರವರ ಪತ್ರ ಸಂಖ್ಯೆ: **ಜಿಪಂ.ತಾಪಂ.ಚುನಾವಣೆ.ವಹಿ.35/2010–11** ದಿನಾಂಕ: 18–11–2011

**ಪ್ರಸ್ತಾವನೆ:**

**ಗದಗ ಜಿಲ್ಲೆ, ಗದಗ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **1–ಬಳಗಾನೂರ** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಹನಮಂತಗೌಡ ರುದ್ರಗೌಡ ಕಲ್ಮನಿ,** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಗದಗ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **12–07–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **23–07–2011** ರಂದು **ಹನಮಂತಗೌಡ ರುದ್ರಗೌಡ ಕಲ್ಮನಿ,** ರವರಿಗೆ **ಗ್ರಾಮಲೆಕ್ಕಿಗರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಹನಮಂತಗೌಡ ರುದ್ರಗೌಡ ಕಲ್ಮನಿ,** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/76(1)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 05–04–2012**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ಗದಗ ಜಿಲ್ಲೆ ಗದಗ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **1–ಬಳಗಾನೂರ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ಹನಮಂತಗೌಡ ರುದ್ರಗೌಡ ಕಲ್ಮನಿ,** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಹನಮಂತಗೌಡ ರುದ್ರಗೌಡ ಕಲ್ಮನಿ,** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**
**ರಾಜ್ಯ ಚುನಾವಣಾ ಆಯೋಗ.**

